


# ಇದೋ ನಿಮ್ಮ ಅಮಾನತು......

ಅನುವಾದಕರು :

ಕೆ. ಮುಹಮ್ಮದ್ ಖಲೀಲ್ ಉಡುಪಿ

**MAKTABA MILLAT**
**Deoband-247554 (U.P.) INDIA**
Ph: 01336-225268(off.) 08126443456(off.)
Mob : 09897278268,09359513645

## ಕಿರುನುಡಿ

ಒಂದು ಕ್ಷಣ ಯೋಚಿಸಿ, ಬೆಂಕಿಯ ಕಿಡಿಯೊಂದು ನಿಮ್ಮ ಮುಂದೆ ಬಿದ್ದಿದ್ದು, ಮುಗ್ಧ ಮಗುವೊಂದು ಅದರೆಡೆಗೆ ಬರಿಗಾಲಿನಲ್ಲಿ ಹೆಜ್ಜೆಯಿಡುತ್ತಿದ್ದರೆ ಮತ್ತು ಅರಿವಿಲ್ಲದೆಯೇ ತನ್ನ ಪುಟ್ಟ ಕಾಲನ್ನು ಅದರ ಮೇಲಿಡಲು ಹೊರಟರೆ ನೀವೇನು ಮಾಡುವಿರಿ ?

ನೀವು ತಕ್ಷಣ ಆ ಮಗುವನ್ನು ಮಡಿಲಲ್ಲಿ ಎತ್ತಿಕೊಂಡು ಬೆಂಕಿಯಿಂದ ದೂರ ಸರಿಸಿ ಅತಿ ಪ್ರಸನ್ನರಾಗುವಿರಲ್ಲವೇ ?

ಅದೇ ಪ್ರಕಾರ, ಒಬ್ಬ ಮನುಷ್ಯ ಅಗ್ನಿಕಣದಲ್ಲಿ ಚಡಪಡಿಸುತ್ತಿದ್ದರೆ ಅಥವಾ ಸುಟ್ಟು ಹೋದರೆ ನೀವು ತಳಮಳಗೊಳ್ಳುವಿರಿ ಮತ್ತು ನಿಮ್ಮ ಹೃದಯದಲ್ಲಿ ಆತನೆಡೆಗೆ ಎಲ್ಲಿಲ್ಲದ ಅನುಕಂಪ ಹುಟ್ಟುವುದು.

ಹೀಗೆಲ್ಲಾ ಯಾಕಾಗುತ್ತದೆಂದು ಎಂದಾದರೂ ಯೋಚಿಸಿದ್ದೀರಾ ? ಕಾರಣ ನಾವೆಲ್ಲಾ ಒಂದೇ ಮಾತಾಪಿತರ ಸಂತಾನವಾಗಿರುವುದಾಗಿದೆ ಮತ್ತು ಪ್ರತಿಯೊಬ್ಬನ ಎದೆಯಲ್ಲೂ ಒಂದು ಮಿಡಿಯುತ್ತಿರುವ ಹೃದಯವಿದೆ. ಅದರಲ್ಲಿ ಪ್ರೀತಿ ವಾತ್ಸಲ್ಯ ಅನುಕಂಪ ಮತ್ತು ಸಹಾನುಭೂತಿಗಳು ಅಡಗಿವೆ. ಅದು ಪರಸ್ಪರರ ಸುಖ ದುಃಖಗಳಲ್ಲಿ ಸ್ಪಂದಿಸುತ್ತದೆ. ಮತ್ತು ಅವರ ಸಹಾಯ ಮಾಡುವುದರೊಂದಿಗೆ ಸಂತೃಪ್ತಿಯನ್ನು ಪಡೆಯುತ್ತದೆ. ಅದೇ ಕಾರಣದಿಂದಲೇ ಯಾರ ಮನಸ್ಸಿನಲ್ಲಿ ಇಡೀ ಮಾನವಕುಲದೆಡೆಗೆ ಪ್ರೇಮ ಉಕ್ಕಿ ಹರಿಯುವುದೋ, ಯಾರ ಪ್ರತಿ ಕಾರ್ಯವೂ ಮಾನವ ಕುಲದ ಕಲ್ಯಾಣಕ್ಕಾಗಿಯೇ ಸೀಮಿತವಾಗಿರುವುದೋ ಯಾರು ಇತರರನ್ನು ದುಃಖ ನೋವುಗಳಲ್ಲಿ ಕಂಡು ಮರುಗುವನೋ ಮತ್ತು ಅಂಥವರ ಸಹಾಯವನ್ನೇ ತನ್ನ



ಜೀವನದ ಅಂಗವನ್ನಾಗಿ ಮಾಡಿಕೊಂಡಿರುವನೋ ಅವನೇ ನಿಜವಾದ ಅರ್ಥದಲ್ಲಿ ಮಾನವನಾಗಿರುವನು.

ಮನುಷ್ಯನ ಇಹ ಲೋಕದ ಜೀವನ ಅಲ್ಪ ಕಾಲಿಕವಾದುದಾಗಿದೆ. ಆದರೆ ಮರಣದ ನಂತರ ಲಭಿಸುವ ಪರಲೋಕದ ಜೀವನವೇ ಶಾಶ್ವತವಾದುದಾಗಿದೆ. ತನ್ನ ನೈಜ ಪ್ರಭುವಿನ ಆರಾಧನೆ ಮತ್ತು ಕೇವಲ ಅವನೊಬ್ಬನನ್ನೇ ಒಪ್ಪಿಕೊಳ್ಳುವ ಹೊರತು ಮರಣಾನಂತರದ ಜೀವನದಲ್ಲಿ ಸ್ವರ್ಗವು ಲಭಿಸಲಾರದು ಮತ್ತು ಅವನು ಶಾಶ್ವತವಾಗಿ ನರಕದ ಇಂಧನವಾಗ ಬೇಕಾಗುವುದು. ಇಂದು ಕೋಟ್ಯಾಂತರ ಜನ ನರಕದ ಇಂಧನವಾಗುವ ದಿಶೆಯಲ್ಲಿ ಪರಿಶ್ರಮ ಪಡುತ್ತಿದ್ದಾರೆ ಮತ್ತು ನೇರವಾಗಿ ನರಕದೆಡೆಗೆ ಕೊಂಡೊಯ್ಯುವ ಮಾರ್ಗದಲ್ಲಿ ದಾಪುಗಾಲನ್ನಿಡುತ್ತಿದ್ದಾರೆ. ಇಂತಹ ವಾತಾವರಣದಲ್ಲಿ ಯಾರ ಮನಸ್ಸಿನಲ್ಲಿ ಮಾನವ ಸಮೂಹದೆಡೆಗೆ ಒಲವಿದೆಯೋ, ಯಾರಿಗೆ ಮನುಷ್ಯತ್ವದಲ್ಲಿ ದೃಢ ನಂಬಿಕೆಯಿದೆಯೋ, ಅವರೆಲ್ಲರ ಆದ್ಯ ಕರ್ತವ್ಯ ಅವರು ಮುಂದೆ ಬಂದು ನರಕದಲ್ಲಿ ಬೀಳಲು ಹೊರಟಿರುವ ಸಕಲ ಮಾನವರನ್ನು ರಕ್ಷಿಸುವ ತಮ್ಮ ಕರ್ತವ್ಯವನ್ನು ಪೂರ್ಣಗೊಳಿಸಲಿ.

### ದಯವಿಟ್ಟು ಕ್ಷಮಿಸಿ:

ಪ್ರಿಯ ಓದುಗರೇ ! ದಯವಿಟ್ಟು ಕ್ಷಮಿಸಿ, ನಾನು ನನ್ನ ಮತ್ತು ಎಲ್ಲ ಮುಸ್ಲಿಂ ಬಾಂಧವರ ಪತಿಯಿಂದ ನಿಮ್ಮ ಬಳಿ ಕ್ಷಮೆ ಯಾಚಿಸುತ್ತೇನೆ. ಶೈತಾನನ (ಪಿಶಾಚಿಯ) ದುಷ್ಪ್ರೇರಣೆಗೊಳಗಾಗಿ ನಿಮ್ಮ ಅಮೂಲ್ಯ ಸಂಪತ್ತನ್ನು ನಿಮ್ಮ ಬಳಿ ತಲುಪಿಸಲಾರದಾದೆವು. ಶೈತಾನನು ಪಾಪದ

ಬದಲು ಪಾಪಿಯ ಕುರಿತು ಜಿಗುಪ್ಸೆಯನ್ನು ನಮ್ಮ ಮನದಲ್ಲಿರಿಸಿ ಸಮಸ್ತ ಜಗತ್ತನ್ನೇ ರಣರಂಗವನ್ನಾಗಿ ಮಾಡಿಸಿದನು. ಈ ತಪ್ಪಿನ ಅರಿವಾಗಿಯೇ ಇಂದು ನಾನು ಲೇಖಣಿಯನ್ನು ಕೈಗೆತ್ತಿಕೊಂಡಿದ್ದೇನೆ, ತನ್ಮೂಲಕ ನಿಮ್ಮ ಹಕ್ಕನ್ನು ನಿಮ್ಮ ಬಳಿ ತಲುಪಿಸಲೆಂದು ಮತ್ತು ನಿಸ್ವಾರ್ಥ ಪ್ರೇಮ ಮತ್ತು ಮನುಷ್ಯತ್ವದ ಕೆಲವು ಮಾತುಗಳನ್ನು ನಿಮ್ಮೊಂದಿಗೆ ಹಂಚಿಕೊಳ್ಳಲೆಂದು, ಹೀಗೆ ಮಾಡಿದ್ದೇನೆ.

"ನಾನು ನಿಸ್ವಾರ್ಥನಾಗಿ ಈ ಕೆಲವು ವಿಶ್ಲೇಷಣೆಗಳನ್ನು ನಿಮ್ಮ ಮುಂದಿಡುವುದರ ಮೂಲಕ ನೈಜ ಅರ್ಥದಲ್ಲಿ ಮಾನವೀಯತೆಯ ನನ್ನ ಕರ್ತವ್ಯವನ್ನು ನಿಭಾಯಿಸಲು ಪ್ರಯತ್ನಿಸುತ್ತಿದ್ದೇನೆ' ಎಂಬುದಕ್ಕೆ ಎಲ್ಲರ ಮನದಾಳದ ರಹಸ್ಯಭೇಧಗಳನ್ನೂ ಅರಿಯುವ ಆ ನೈಜ ಪ್ರಭುವೇ ಸಾಕ್ಷಿ. ಈ ಸತ್ಯವನ್ನು ನಿಮ್ಮ ಬಳಿ ತಲುಪಿಸುವಲ್ಲಿ ವಿಫಲವಾಗಿದ್ದ ಚಿಂತೆಯಲ್ಲಿ ನಾನು ಅದೆಷ್ಟೋ ರಾತ್ರಿಗಳು ನಿದ್ದೆಗೆಡಬೇಕಾಯಿತು. ನಿಮ್ಮ ಹೃದಯವನ್ನೇ ಒಮ್ಮೆ ವಿಚಾರಿಸಿ ಅದೂ, ಸತ್ಯಕ್ಕೆ ಸ್ಪಂದಿಸುತ್ತದೆ.

**ಪ್ರೇಮವಾಣಿ:**

ಇದು ಹೇಳುವಂತಹ ಮಾತಲ್ಲವಾದರೂ, ನನ್ನ ಈ ಪ್ರೇಮ ವಾಣಿಯನ್ನು ನೀವೂ ಪ್ರೇಮಭರಿತ ಕಣ್ಣುಗಳಿಂದ ವಿಮರ್ಶಿಸಿ ಪಠಿಸಲೆಂದು ಬಯಸುತ್ತೇನೆ. ಇಡೀ ವಿಶ್ವವನ್ನೇ ನಿರ್ಮಿಸಿ ನಿಯಂತ್ರಿಸುತ್ತಿರುವ ಆ ನಮ್ಮ ಪ್ರಭುವಿಗಾಗಿ ಲಕ್ಷ್ಯವಿಟ್ಟು ಗಮನಿಸಿ, ಆ ಮೂಲಕ ನಾನು ನನ್ನ ಸಹೋದರ ಸಹೋದರಿಯರ ಹಕ್ಕನ್ನು ಅವರಿಗೆ ತಲುಪಿಸುವಲ್ಲಿ ಸಫಲನಾದೆ ಮತ್ತು ಮನುಷ್ಯನಾಗಿ ನನ್ನ ಕರ್ತವ್ಯವನ್ನು ನಿಭಾಯಿಸಿದೆ ಎಂಬ ಬಗ್ಗೆ ನನ್ನ ಮನಸ್ಸಿಗೆ ಮತ್ತು ಆತ್ಮಕ್ಕೆ ತೃಪ್ತಿ ಸಿಗುವುದು.



ಈ ಜಗತ್ತಿನಲ್ಲಿ ಇಹಲೋಕದ ಈ ಜೀವನವು ಲಭಿಸಿದ ಪ್ರತಿಯೊಬ್ಬ ಮನುಷ್ಯನಿಗೂ ಯಾವ ಸತ್ಯವನ್ನು ಅರಿಯುವುದು ಮತ್ತು ಒಪ್ಪಿ ನಡೆಯುವುದು ಅವಶ್ಯಕವಾಗಿದೆಯೋ ಮತ್ತು ಅದುವೇ ಅವನ ಅತಿ ದೊಡ್ಡ ಜವಾಬ್ದಾರಿ ಮತ್ತು ಕರ್ತವ್ಯವಾಗಿದೆಯೋ ಆ ಪ್ರೇಮವಾಣಿಯನ್ನು ನಾನು ನಿಮಗೆ ತಿಳಿಸಬಯಸುತ್ತೇನೆ.

**ಪ್ರಕೃತಿಯ ಅತಿ ದೊಡ್ಡ ಸತ್ಯ:**

ಪ್ರಕೃತಿಯ ಅತಿ ದೊಡ್ಡ ಸತ್ಯವೇನೆಂದರೆ ಇಡೀ ವಿಶ್ವದ ನಿರ್ಮಾತೃ, ಸಕಲ ಸೃಷ್ಟಿಗಳ ಸೃಷ್ಟಿಕರ್ತ, ಭೂಮಿ-ಆಕಾಶಗಳ ನಿರ್ಮಾಣ ಮತ್ತು ಅವೆಲ್ಲವುಗಳ ನಿಯಂತ್ರಣ ಮಾಡುವವನು ಕೇವಲ ಆ ಏಕೈಕ ಪ್ರಭುವಾಗಿದ್ದಾನೆ. ಅವನು ತನ್ನ ಅಸ್ತಿತ್ವ ಮತ್ತು ಗುಣ ವಿಶೇಷಗಳಲ್ಲಿ ಏಕೈಕನಾಗಿದ್ದಾನೆ.

ಪ್ರಪಂಚದ ನಿರ್ಮಾಣ, ನಿಯಂತ್ರಣ ಮತ್ತು ಉಳಿವು ಅಳಿವುಗಳಲ್ಲಿ ಅವನೊಂದಿಗೆ ಯಾರೂ ಸಹಭಾಗಿಗಳಿಲ್ಲ, ಅವನ ಪ್ರಭುತ್ವವು ಸಮಸ್ತ ಜಗತ್ತನ್ನೇ ವ್ಯಾಪಿಸಿಕೊಂಡಿದೆ. ಅವನು ಎಲ್ಲರನ್ನೂ ಆಲಿಸುತ್ತಾನೆ ಮತ್ತು ವೀಕ್ಷಿಸುತ್ತಾನೆ. ಇಡೀ ವಿಶ್ವದಲ್ಲಿಯೇ ಅವನ ಆಜ್ಞೆಯ ವಿನಃ ಒಂದು ಎಲೆಯೂ ತನ್ನ ಸ್ಥಾನದಿಂದ ಕದಲಲಾರದು.

ಪ್ರತಿಯೊಬ್ಬನ ಅಂತರಾತ್ಮವು ತನ್ನ ಸಂರಕ್ಷಕ ಪ್ರಭು ಮತ್ತು ನೈಜ ಆರಾಧ್ಯನ ಏಕತೆಯಲ್ಲಿ ದೃಢ ನಂಬಿಕೆಯನ್ನಿಟ್ಟು ಆ ಕುರಿತು ಸಾಕ್ಷ್ಯವಹಿಸುತ್ತದೆ, ಆ ವ್ಯಕ್ತಿಯು ಯಾವುದೇ ಧರ್ಮದ ಅನುಯಾಯಿಯಾಗಿರಲಿ ಅಥವಾ ಮೂರ್ತಿಪೂಜೆಯನ್ನೇ ಅನುಸರಿಸುತ್ತಿರಲಿ.

ಸಕಲ ಸೃಷ್ಟಿಗಳ ಒಡೆಯನು ಏಕೈಕನೆಂಬುದರ ಹೊರತು ಅನ್ಯ ನಂಬಿಕೆಗಳು ಮನುಷ್ಯನ ಬುದ್ಧಿಗೆ ಎಟುಕುವಂಥದ್ದಲ್ಲ. ಯಾವ ರೀತಿ ಒಂದು ಶಾಲೆಯಲ್ಲಿ ಇಬ್ಬರು ಮುಖ್ಯಾಧ್ಯಾಪಕರು ಇದ್ದರೆ ಶಾಲಾ ಆಡಳಿತ ವ್ಯತ್ಯಯಗೊಳ್ಳುವುದೋ ಅಥವಾ ಒಂದು ಗ್ರಾಮದಲ್ಲಿ ಇಬ್ಬರು ಮುಖಂಡರಿದ್ದರೆ ಆ ಗ್ರಾಮದ ಕಲ್ಯಾಣದಲ್ಲಿ ನಷ್ಟವುಂಟಾಗುವುದೋ ಅಥವಾ ಯಾವ ರೀತಿ ಒಂದು ಪ್ರದೇಶದ ರಾಜ್ಯಾಡಳಿತವನ್ನು ನಿರ್ವಹಿಸಲು ಇಬ್ಬರು ರಾಜರಿರಲು ಸಾಧ್ಯವಿಲ್ಲವೋ ಅದೇ ರೀತಿ ಇಡೀ ಜಗತ್ತಿನ ವ್ಯವಸ್ಥೆಯು ಒಬ್ಬನಿಗಿಂತ ಹೆಚ್ಚು ಪ್ರಭುಗಳ ಮೂಲಕ ಹೇಗೆ ತಾನೆ ನಡೆಯಲು ಸಾಧ್ಯ ? ಮತ್ತು ಅವುಗಳ ವ್ಯವಸ್ಥಾಪಕ ''ಪ್ರಬಂಧಕ ಪ್ರಭು'' ಒಬ್ಬನಿಗಿಂತ ಹೆಚ್ಚಿರಲು ಹೇಗೆ ತಾನೆ ಸಾಧ್ಯ?

**ಒಂದು ಪುರಾವೆ :**

ಖುರ್‌ಆನ್ ಅಲ್ಲಾಹನ ವತಿಯಿಂದ ಅವತೀರ್ಣ ಗೊಂಡಿರುವಂಥ ಒಂದು ದಿವ್ಯವಾಣಿ. ಖುರ್‌ಆನ್ ತನ್ನ ಅಸ್ತಿತ್ವದ ನಿಖರತೆ ಮತ್ತು ನೈಜತೆಯನ್ನು ಸ್ಪಷ್ಟಪಡಿಸುತ್ತ ಈ ರೀತಿ ಸವಾಲೆಸೆಯುತ್ತದೆ. ''ಒಂದು ವೇಳೆ **ಖುರ್‌ಆನ್ ನಿಮಗೆ ಸೃಷ್ಟಿಕರ್ತ ಪ್ರಭುವಿನ ವತಿಯಿಂದ ಅವತ್ತೀರ್ಣ ಗೊಂಡಿರುವುದರಲ್ಲಿ ಸಂದೇಹವಿದ್ದರೆ ಇದಕ್ಕೆ ಸರಿಸಮಾನವಾದ ಒಂದು ಅಧ್ಯಾಯವನ್ನಾದರೂ ರಚಿಸಿ ತನ್ನಿರಿ. ಅಲ್ಲಾಹನ ಹೊರತು ನಿಮ್ಮೆಲ್ಲಾ ಸಾಕ್ಷಿಗಳನ್ನು ನಿಮ್ಮ ಸಹಾಯಕ್ಕಾಗಿ ಕರೆದು ತನ್ನಿರಿ. ನೀವು**



**ಸತ್ಯವಾದಿಯಾಗಿದ್ದರೆ ಈ ಕಾರ್ಯವನ್ನು ಮಾಡಿ ತೋರಿಸಿರಿ.** (ಅಲ್‌ಬಕರ2:23).

1400 ವರ್ಷಗಳಿಂದ ಈ ಜಗತ್ತಿನ ಜನರು ಇಂದಿನವರೆಗೂ, ವಿಜ್ಞಾನ ಮತ್ತು ಕಂಪ್ಯೂಟರ್‌ಗಳ ಬಳಕೆಯಿಂದಲೂ ಶೋಧಿಸಿ ಬಳಲಿದ್ದಾರೆ ಮತ್ತು ವಿಧಿಯಿಲ್ಲದೇ ತಮ್ಮ ತಲೆ ತಗ್ಗಿಸಿದ್ದಾರೆ. ಆದರೆ ಇದುವರೆಗೂ ಖುರ್‌ಆನ್ ಅಲ್ಲಾಹನ ವಾಣಿಯಲ್ಲವೆಂದು ಹೇಳುವ ಸಾಹಸ ಯಾರಿಂದಲೂ ಸಾಧ್ಯವಾಗಿಲ್ಲ. ಈ ಪವಿತ್ರ ಗ್ರಂಥದಲ್ಲಿ ಪ್ರಭುವು ಮಾನವನ ಬುದ್ಧಿಗೆ ಎಟುಕುವಂಥ ಮತ್ತು ಸುಲಭವಾಗಿ ಅರ್ಥೈಸಿಕೊಳ್ಳುವಂಥ ಅನೇಕ ಪುರಾವೆಗಳನ್ನು ನೀಡಿದ್ದಾನೆ ಉದಾ :- **ಒಂದು ವೇಳೆ ಭೂಮಿ ಆಕಾಶಗಳಲ್ಲಿ ಅನೇಕ ಆರಾಧ್ಯ ದೇವರುಗಳಿರುತ್ತಿದ್ದರೆ, ಕೆಡಕು ಮತ್ತು ಗಲಭೆಗಳು ಎಲ್ಲೆಲ್ಲೂ ತಾಂಡವಾಡುತ್ತಿತ್ತು.** ಇಲ್ಲಿ ಒಂದು ಮಾತು ಸ್ಪಷ್ಟವಾಗಿದೆ. **ಒಂದು ವೇಳೆ ಒಬ್ಬನ ಹೊರತು ಅನೇಕ ಪ್ರಭುಗಳು ಇರುತ್ತಿದ್ದರೆ ಅವರ ನಡುವೆ ಕಲಹಗಳುಂಟಾಗುತ್ತಿದ್ದವು.** ಒಬ್ಬನ ಬಯಕೆ ಹಗಲಾಗಿರುವಂತಿದ್ದರೆ ಇನ್ನೊಬ್ಬ ರಾತ್ರಿಯನ್ನು ಬಯಸುತ್ತಿದ್ದನು. ಒಬ್ಬನು ಆರು ತಿಂಗಳ ಒಂದು ದಿನ ಆಗುವಂತೆ ಬಯಸಿದರೆ, ಇನ್ನೊಬ್ಬ ಮೂರು ತಿಂಗಳ ಒಂದು ದಿನವನ್ನು ಬಯಸುತ್ತಿದ್ದನು. ಒಬ್ಬನ ನಿರ್ಣಯ ಸೂರ್ಯನು ಪೂರ್ವದಿಂದ ಉದಯಿಸಬೇಕೆಂದಿದ್ದರೆ ಇನ್ನೊಬ್ಬ ಪಶ್ಚಿಮದಿಂದಲೇ

ಉದಯಿಸಬೇಕೆಂದು ನಿಶ್ಚಯಿಸುತ್ತಿದ್ದನು. ಒಂದು ವೇಳೆ ಅನೇಕ ದೇವರು ದೇವತೆಗಳ ಅಸ್ತಿತ್ವವು ನಿಜವಾಗಿದ್ದರೆ ಮತ್ತು ಅಲ್ಲಾಹನ ಕಾರ್ಯಾಧಿಕಾರಗಳಲ್ಲಿ ಅವರ ಪಾಲು ಇರುತ್ತಿದ್ದರೆ ಕೆಲವೊಮ್ಮೆ ಹೀಗಾಗುತ್ತಿತ್ತು. ಒಬ್ಬ ದಾಸ ಪೂಜೆ - ಅರ್ಚನೆಗಳಿಂದ ಮಳೆಯ ದೇವ, ಮಳೆರಾಯನನ್ನು ಒಲಿಸಿಕೊಂಡರೆ ಆ ಮಳೆರಾಯನ ಮೇಲಾಧಿಕಾರಿ ಮಳೆ ಆಗದಂತೆ ಆಜ್ಞೆ ನೀಡಿದ್ದಲ್ಲಿ ಕೆಳಗಿನ ದೇವರುಗಳು ಮುಷ್ಕರ ಕೈಗೊಳ್ಳುತ್ತಿದ್ದರು. ಜನರು ದಿನ ಬೆಳಗುವುದನ್ನು ಕಾಯುತ್ತಿರುವಾಗ, ಸೂರ್ಯ ದೇವನೂ, ಮುಷ್ಕರದಲ್ಲಿ ಪಾಲ್ಗೊಂಡಿರುವುದಾಗಿ ತಿಳಿಯುತ್ತಿತ್ತು.

**ಸತ್ಯಸಹಿತ ಪ್ರಮಾಣ**

ನಿಜ ಸಂಗತಿ ಏನೆಂದರೆ ಈ ಜಗತ್ತಿನಲ್ಲಿ ಅಸ್ತಿತ್ವದಲ್ಲಿರುವ ಎಲ್ಲವೂ ನಮ್ಮ ಪ್ರಭುವು ಏಕೈಕನೆಂದು ಸಾಕ್ಷ್ಯವಹಿಸುತ್ತದೆ. ಈ ಸೃಷ್ಟಿಯ ಸುವ್ಯವಸ್ಥೆ ನಮ್ಮ ಪ್ರಭು ಏಕೈಕನೆಂದು ಒತ್ತಿ ಒತ್ತಿ ಹೇಳುತ್ತಿದೆ. ಆ ನಮ್ಮ ಪ್ರಭು ಏನನ್ನಾದರೂ ಯಾವಾಗಲಾದರೂ ಮಾಡಲು ಸಮರ್ಥನು. ಅವನ ಬಗ್ಗೆ ಯೋಚಿಸಿ ಅವನ ಅಸ್ತಿತ್ವದ ರೂಪು ರೇಷೆಗಳನ್ನು ಕಲ್ಪಿಸಿಕೊಳ್ಳುವುದು ಅಸಾಧ್ಯ ಅವನ ಮೂರ್ತಿಯನ್ನಂತೂ ನಿರ್ಮಿಸುವಂತೆಯೇ ಇಲ್ಲ. ಆ ನಮ್ಮ ಪ್ರಭುವು ಇಡೀ ವಿಶ್ವವನ್ನು ಮಾನವನ ಸೇವೆಗೋಸ್ಕರ ನಿರ್ಮಿಸಿದನು. ಸೂರ್ಯ, ವಾಯು,



ಭೂಮಿ ಎಲ್ಲವೂ ಮಾನವನ ಸಹಾಯಕ್ಕಾಗಿ ಹಾಗೂ ಅಗ್ನಿ, ಜಲ, ಜೀವಿ, ಜಂತುಗಳೆಲ್ಲವೂ ಮನುಷ್ಯನ ಸೇವೆಗಾಗಿಯೇ ನಿರ್ಮಿಸಲ್ಪಟ್ಟಿದೆ. ಮನುಷ್ಯನನ್ನು ಇವೆಲ್ಲದರ ನಾಯಕನನ್ನಾಗಿ ಮಾಡಲಾಗಿದೆ ಮತ್ತು ಕೇವಲ ಆ ಏಕೈಕ ಪ್ರಭುವಿನ ದಾಸ್ಯ ಆರಾಧನೆ ಮತ್ತು ಆಜ್ಞಾಪಾಲನೆಗಾಗಿ ಮಾತ್ರ ಮಾನವನ ಸೃಷ್ಟಿಯಾಗಿದೆ.

**ನ್ಯಾಯೋಚಿತ ಮತ್ತು ಯೋಚಿಸತಕ್ಕಂಥ ಮಾತು:**

ನಮ್ಮನ್ನೆಲ್ಲಾ ಸೃಷ್ಟಿಸಿದವನು ಜೀವನವನ್ನು ನೀಡುವವನು, ಪ್ರಾಣಹರಣ ಮಾಡುವವನು, ಅನ್ನ ಪಾನೀಯಗಳನ್ನು ದಯಪಾಲಿಸುವವನು ಮತ್ತು ಜೀವನದ ಪ್ರತಿಯೊಂದು ಅವಶ್ಯಕ ಬಯಕೆಯನ್ನು ಈಡೇರಿಸುವವನು ಅವನೊಬ್ಬನೇ ಆಗಿರುವಾಗ ಒಬ್ಬ ಸತ್ಯಸಂಧ ಮನುಷ್ಯ ತನ್ನ ಜೀವನ ಮತ್ತು ಜೀವನಕ್ಕೆ ಸಂಬಂಧಿತ ಎಲ್ಲ ಕ್ರಿಯೆಗಳನ್ನು ತನ್ನ ಪ್ರಭುವಿನ ಅಪ್ಪಣೆಯಂತೆ ಅವನ ಆಜ್ಞಾಪಾಲಕ ದಾಸನಾಗಿ ಈಡೇರಿಸುವುದರಲ್ಲೇ ಅರ್ಥವಿದೆ. ಒಂದು ವೇಳೆ ಇದಕ್ಕೆ ತದ್ವಿರುದ್ಧವಾಗಿ ನಡೆದಲ್ಲಿ ಅವನು ಮನುಷ್ಯನಾಗಿರಲು ಅರ್ಹನಲ್ಲ.

**ಮಹತ್ತಾದ ಸತ್ಯ:**

ಆ ನೈಜ ಪ್ರಭುವು ತನ್ನ ಅಂತಿಮ ಗ್ರಂಥವಾದ ಖುರ್‌ಆನಿನಲ್ಲಿ ಒಂದು ಸತ್ಯವನ್ನು ನಮಗೆ ತಿಳಿಸಿರುವನು. " ಪ್ರತಿಯೊಂದು ಜೀವಿಗೂ ಮೃತ್ಯುವಿನ ರುಚಿಯನ್ನು ಸವಿಯಲಿಕ್ಕಿದೆ. ತರುವಾಯ ನೀವೆಲ್ಲರೂ ನಮ್ಮ ಕಡೆಗೆ ಮರಳಿ ತರಲ್ಪಡುವಿರಿ" (ಸೂರ ಅಂಕಬೂತ್ 29:57).

ಈ ಸೂಕ್ತಿಯಲ್ಲಿ ಎರಡು ವಿಭಾಗಗಳಿವೆ. ಮೊದಲನೆಯದಾಗಿ ಪ್ರತಿಯೊಂದು ಜೀವಿಗೂ ಮರಣದ ಸವಿಯನ್ನು ಸವಿಯಲೇ

ಬೇಕಾಗಿದೆ. ಇದು ಎಂಥ ಸತ್ಯವೆಂದರೆ, ಎಲ್ಲ ಧರ್ಮ, ಸಮಾಜ ಮತ್ತು ಪ್ರದೇಶಗಳ ಜನರು ಇದರಲ್ಲಿ ಸಂಪೂರ್ಣ ವಿಶ್ವಾಸ ವಿಡುತ್ತಾರೆ. ಅಷ್ಟೇ ಅಲ್ಲ, ಯಾರು ಧರ್ಮವನ್ನೇ ನಂಬುವುದಿಲ್ಲವೋ ಅವನೂ ಈ ಸತ್ಯದ ಮುಂದೆ ತಲೆ ಬಾಗುವನು ಮತ್ತು ಪ್ರಾಣಿಗಳೂ ಮರಣದ ಸತ್ಯವನ್ನು ಅರ್ಥೈಸಿಕೊಂಡಿವೆ. ಇಲಿಯು ಬೆಕ್ಕನ್ನು ಕಂಡು ಓಡಿದರೆ, ನಾಯಿ ರಸ್ತೆಯಲ್ಲಿ ಬರುತ್ತಿರುವ ಗಾಡಿಯನ್ನು ಕಂಡು ಓಡುತ್ತದೆ. ಏಕೆಂದರೆ ಅವುಗಳಿಗೂ ಮರಣದ ಬಗ್ಗೆ ಸಂಪೂರ್ಣ ವಿಶ್ವಾಸವಿದೆ.

**ಮರಣದ ನಂತರ:**

ಈ ಮೇಲಿನ ಸೂಕ್ತಿಯ ಇನ್ನೊಂದು ಭಾಗವು ಸುವ್ಯಕ್ತ ಖುರ್‌ಆನಿನ ಒಂದು ಮಹತ್ತಾದ ಸತ್ಯದೆಡೆಗೆ ನಮ್ಮನ್ನು ಆಕರ್ಷಿಸುತ್ತದೆ. ಈ ಸತ್ಯವು ಮನುಷ್ಯನಿಗೆ ಮನವರಿಕೆಯಾದಲ್ಲಿ ಈ ಜಗತ್ತಿನ ವಾತಾವರಣವೇ ಬದಲಾಗುತ್ತಿತ್ತು. ಆ ಸತ್ಯವೇನೆಂದರೆ ನೀವೆಲ್ಲ ಮರಣದ ನಂತರ ತಮ್ಮ ಪ್ರಭುವಿನ ಕಡೆಗೇ ಮರಳಿಸಲ್ಪಡುವಿರಿ ಮತ್ತು ಇಹಲೋಕದ ನಿಮ್ಮ ಕರ್ಮಗಳಿಗನುಸಾರ ಪ್ರತಿಫಲವನ್ನು ಪಡೆಯುವಿರಿ ಎಂಬುದಾಗಿದೆ.

ಮರಣದ ನಂತರ, ನಾವು ಕೊಳೆತು ಮಣ್ಣಾಗಿ ಹೋಗುವೆವು ಮತ್ತು ಪುನಃ ಜೀವಂತಗೊಳಿಸಲಾರೆವು ಎಂಬುದು ಸತ್ಯವಲ್ಲ. ಇನ್ನೊಂದೆಡೆ ಮರಣದ ನಂತರ ನಮ್ಮ ಆತ್ಮವು ಇನ್ನೊಂದು ಗರ್ಭವನ್ನು ಪ್ರವೇಶಿಸುವುದು ಎಂಬುದೂ ಸತ್ಯವಲ್ಲ. ಇವೆಲ್ಲ ಮಾನವ ಬುದ್ಧಿಗೆ ಸರಿದೂಗುವ ವಿಷಯವಲ್ಲ.

ಪ್ರಥಮವಾಗಿ, ಪುನರ್ಜನ್ಮದ ದೃಷ್ಟಿಕೋನವು ವೇದಗಳಿಂದ ಲಭ್ಯವಿರುವುದಲ್ಲ. ನಂತರ ಬರೆದ ಪುರಾಣಗಳಲ್ಲಿ ಇದರ



ಉಲ್ಲೇಖವಿದೆ. ಆದರಿಂದ ತಿಳಿಯುವುದೇನೆಂದರೆ ಮನುಷ್ಯನ ವೀರ್ಯಾಣು ವಿನಲ್ಲಿ ಬರೆದಿಡಲ್ಪಟ್ಟಂತಹ ಸಂತಾನ ಗುಣ ತಂದೆಯಿಂದ ಮಗ ಮತ್ತು ಮಗನಿಂದ ಅವನ ಮಗನಿಗೆ ಪ್ರಾಪ್ತವಾಗುತ್ತದೆ. ಈ ಧಾರಣೆಯ ಆರಂಭ ಈ ರೀತಿಯಾಗುತ್ತದೆ. ಶೈತಾನನು (ಪಿಶಾಚಿಯು) ಧರ್ಮದ ಹೆಸರಿನಲ್ಲಿ ಮೇಲು-ಕೀಳೆಂಬ ಭಾವನೆಯನ್ನು ಜನರಲ್ಲಿ ಮೂಡಿಸಿದನು. ಧರ್ಮದ ಹೆಸರಿನಲ್ಲಿ ಶೂದ್ರರಿಂದ ಸೇವೆಯನ್ನು ಪಡೆದು, ಅವರನ್ನು ಕೀಳಾಗಿ ಭಾವಿಸುತ್ತಿದ್ದ ಧರ್ಮದ ಮುಖಂಡರನ್ನು ಅವರ ದಬ್ಬಾಳಿಕೆಗೊಳಗಾದ ಈ ಪೀಡಿತ ಜನರು, "ನಮ್ಮನ್ನು ಸೃಷ್ಟಿಸಿದವನು ಏಕೈಕನಾಗಿರುವಾಗ ಅವನು ಕಣ್ಣು, ಕಿವಿ, ಮೂಗು, ಎಲ್ಲದರಲ್ಲೂ ನಮ್ಮನ್ನು ಸರಿ ಸಮಾನವಾಗಿ ಮಾಡಿರುವಾಗ ನೀವು ತಮ್ಮನ್ನು ಶ್ರೇಷ್ಠರನ್ನಾಗಿ ಮಾಡಿಕೊಂಡು ನಮ್ಮನ್ನು ನೀಚರನ್ನಾಗಿ ಮಾಡಿರುವುದಾದರೂ ಏಕೆ ?" ಎಂದು ಪ್ರಶ್ನಿಸಿದಾಗ, ಅವರು ಪುನರ್ಜನ್ಮದ ನೆಪವೊಡ್ಡಿ ನಿಮ್ಮ ಹಿಂದಿನ ಜನ್ಮದ ಕರ್ಮಗಳಿಗನುಸಾರ ನೀವು ನೀಚರಾಗಿ ಸೃಷ್ಟಿಸಲ್ಪಟ್ಟಿದ್ದೀರಿ ಎಂಬ ಹೇಳಿಕೆಯನ್ನು ನೀಡಿದರು.

ಈ ಧಾರಣೆಯನುಸಾರ ಆತ್ಮವು ಇನ್ನೊಮ್ಮೆ ಜನಿಸಿ ತಮ್ಮ ಕರ್ಮಗಳಿಗನುಸಾರ ಗರ್ಭ ಬದಲಿಸುತ್ತದೆ. ಅತೀ ಹೆಚ್ಚು ಕುಕೃತ್ಯಗಳನ್ನು ಮಾಡಿರುವ ಜನರು ಪ್ರಾಣಿವರ್ಗವನ್ನು ಸೇರಿಕೊಳ್ಳುತ್ತಾರೆ. ಅದಕ್ಕೂ ಅಧಿಕ ದುಷ್ಕೃತ್ಯಗಳೆಸಗಿದವರು ಸಸ್ಯವರ್ಗವನ್ನು ಸೇರಿಕೊಳ್ಳುತ್ತಾರೆ. ಯಾರ ಕರ್ಮವು ಉತ್ತಮವಾಗಿರುವದೋ ಅವರು ಮೋಕ್ಷವನ್ನು ಪಡೆಯುತ್ತಾರೆ.

## ಪುನರ್ಜನ್ಮದ ವಿರುದ್ಧ ಮೂರು ತರ್ಕಗಳು:

1. ಈ ಕ್ರಮದಲ್ಲಿ ಅತಿ ಮುಖ್ಯ ವಿಷಯವೆಂದರೆ ಇಡೀ ಪ್ರಪಂಚದ ವಿದ್ವಾಂಸರು ಮತ್ತು ಸಂಶೋಧನೆಯನ್ನು ನಡೆಸುತ್ತಿರುವ ವಿಜ್ಞಾನಿಗಳ ಪ್ರಕಾರ ಈ ಭೂಮಿಯಲ್ಲಿ ಪ್ರಥಮವಾಗಿ ಸಸ್ಯವರ್ಗವು ಸೃಷ್ಟಿಸಲ್ಪಟ್ಟಿತು. ನಂತರ ಪ್ರಾಣಿವರ್ಗ ಮತ್ತು ಅದಾದ ನಂತರ ಕೋಟ್ಯಾಂತರ ವರ್ಷಗಳ ಅಂತರದಲ್ಲಿ ಮನುಷ್ಯನ ಸೃಷ್ಟಿಯಾಯಿತು. ಈಗ ಯೋಚಿಸತಕ್ಕಂಥ ವಿಷಯವೆಂದರೆ, ಮನುಷ್ಯ ವರ್ಗವೇ ಸೃಷ್ಟಿಯಾಗದಿರುವಾಗ ಮತ್ತು ದುಷ್ಕೃತ್ಯಗಳ ಪ್ರಶ್ನೆಯೇ ಇಲ್ಲದಿರುವಾಗ ಯಾವ ಆತ್ಮವು ಸಸ್ಯವರ್ಗ ಮತ್ತು ಪ್ರಾಣಿ ವರ್ಗಗಳ ರೂಪವನ್ನು ತಾಳಿತು?

2. ಎರಡನೆಯದಾಗಿ ಈ ಸಿದ್ಧಾಂತವನ್ನು ಒಪ್ಪಿಕೊಂಡಲ್ಲಿ ಇನ್ನೊಂದು ವಿಷಯವನ್ನು ಒಪ್ಪಿಕೊಳ್ಳಬೇಕಾಗುವುದು. ಅದೇನೆಂದರೆ, ಭೂಮಿಯಲ್ಲಿ ಪ್ರಾಣಿಗಳ ಸಂಖ್ಯೆಯು ನಿರಂತರ ಕ್ಷೀಣಿಸಬೇಕಿತ್ತು. ಆತ್ಮವು ಮೋಕ್ಷ ಪಡೆದಂತೆಲ್ಲಾ ಜನಸಂಖ್ಯೆಯೂ ಕ್ಷೀಣಿಸಬೇಕಿತ್ತು. ಆದರೆ ಇದಕ್ಕೆ ತದ್ವಿರುದ್ಧವಾಗಿ ಸತ್ಯ ನಮ್ಮ ಕಣ್ಮುಂದಿದೆ. ಈ ವಿಶಾಲ ಭೂಮಿಯಲ್ಲಿ ಜನಸಂಖ್ಯೆ, ಜೀವಜಂತುಗಳ ಸಂಖ್ಯೆ ನಿರಂತರವಾಗಿ ವೃದ್ಧಿಸುತ್ತಲೇ ಇವೆ.

3. ಮೂರನೆಯದಾಗಿ ಈ ಜಗತ್ತಿನಲ್ಲಿ ಜನ್ಮ ಪಡೆಯುವ ಮತ್ತು ಮರಣ ಹೊಂದುವವರ ಸಂಖ್ಯೆಗಳನ್ನು ವೀಕ್ಷಿಸಿದಾಗ, ಅಜಗಜಾಂತರ ವ್ಯತ್ಯಾಸ ಕಂಡುಬರುತ್ತದೆ. ಮರಣ ಹೊಂದುವವರ ಸಂಖ್ಯೆಗೆ ಹೋಲಿಸಿದಲ್ಲಿ ಜನಿಸುವ ಮಕ್ಕಳ ಸಂಖ್ಯೆಯು ಅತ್ಯಧಿಕವಾಗಿರುವುದು ಕೆಲವೊಮ್ಮೆ ಕೋಟ್ಯಾಂತರ ಸೊಳ್ಳೆಗಳು ಹುಟ್ಟಿಕೊಳ್ಳುತ್ತವೆ. ಆದರೆ



ಸಾಯುವವರ ಸಂಖ್ಯೆ ತೀರಾ ಕಡಿಮೆಯಾಗಿರುತ್ತದೆ. **ಕೆಲವೊಮ್ಮೆ** ಇಂಥ ವದಂತಿಗಳೂ ಹರಡುತ್ತವೆ. ಆ ಮಗುವು ತಾನು ಮೊದಲಿದ್ದ ಸ್ಥಳವನ್ನು ಗುರುತಿಸುತ್ತಿದೆ. ತನ್ನ ಹಳೆಯ ಹೆಸರನ್ನು ಹೇಳುತ್ತಿದೆ ಮತ್ತು ಅದು ಪುನರ್ಜನ್ಮ ಪಡೆದಿದೆ '' ಎಂದು. ಇವೆಲ್ಲ ಕೇವಲ ಶೈತಾನನ (ಪಿಶಾಚಿಯ) ಕೃತ್ಯ ಅವನು ಮಕ್ಕಳ ತಲೆಯೇರಿ ಈ ರೀತಿ ವರ್ತಿಸುತ್ತಾನೆ. ಮತ್ತು ಮನುಷ್ಯನ ಧರ್ಮ ಮತ್ತು ಸತ್ಯಾವಿಶ್ವಾಸವನ್ನು ದುರ್ಬಲಗೊಳಿಸುತ್ತಾನೆ.

ನಿಜ ಸಂಗತಿಯೆಂದರೆ, ಮರಣದ ನಂತರ ಸತ್ಯವು ಪ್ರತಿಯೊಬ್ಬನ ಮುಂದೆ ಪ್ರಕಟಗೊಳ್ಳುವುದು. ಪ್ರತಿಯೊಬ್ಬನಿಗೂ, ಮರಣದ ನಂತರ ತನ್ನ ಪ್ರಭುವಿನ ಬಳಿ ಹಾಜರಾಗಲೇಬೇಕಾಗುವುದು ಮತ್ತು ಈ ಜಗತ್ತಿನಲ್ಲಿ ಅವನು ಮಾಡಿದ ಕರ್ಮಗಳಿಗನುಸಾರ ಅವನು ಶಿಕ್ಷೆ ಅಥವಾ ಪುರಸ್ಕಾರ ಪಡೆದೇ ತೀರುವನು.

## ಕರ್ಮಫಲ ಸಿಗಲಿದೆ:

ಸತ್ಕರ್ಮಗಳನ್ನೆಸಗುವ, ಒಳಿತಿನ ಹಾಗೂ ನ್ಯಾಯಪರ ಹಾದಿಯಲ್ಲಿ ನಡೆಯುವ ಮೂಲಕ ಸ್ವರ್ಗವನ್ನು ಕಾಣಬಹುದು. ಸ್ವರ್ಗವು ನೆಮ್ಮದಿಯಿಂದ ತುಂಬಿತುಳುಕುತ್ತಿರುವುದು ಸ್ವರ್ಗವು ಯಾರೂ ಕಂಡಿರದಂತಹ, ಕೇಳಿರದಂತಹ ಮತ್ತು ಯಾವ ಮನಸ್ಸೂ ಊಹಿಸಿರದಂತಹ ಸಕಲ ಸುಖಪ್ರದ ಮತ್ತು ಆರಾಮದಾಯಕ ವಸ್ತುಗಳಿಂದ ತುಂಬಿಕೊಂಡಿರುವುದು. ಇವೆಲ್ಲಕ್ಕಿಂತ ಮಿಗಿಲಾಗಿ ಸ್ವರ್ಗವಾಸಿಗಳು ತಮ್ಮ ಕಣ್ಣಾರೆ ತಮ್ಮ ಪ್ರಭುವಿನ ದರ್ಶನವನ್ನು ಪಡೆಯುವರು. ಅದಕ್ಕೆ ಸರಿಸಮಾನವಾದ ಹರ್ಷ ವಿನೋದಗಳ ಮಾತು ಇನ್ನಾವುದಾದರೂ ಇದೆಯೇ ?

ಅದೇ ರೀತಿ ಯಾರು ಕುಕರ್ಮಗಳನ್ನೆಸಗುವರೋ ಪಾಪಗಳೆನ್ನೆಸಗುವ ಮೂಲಕ ತನ್ನ ಪ್ರಭುವಿನ ಆಜ್ಞೋಲ್ಲಂಘನೆ ಮಾಡುವರೋ ಅವರನ್ನು ನರಕಕ್ಕೆ ತಳ್ಳಲಾಗುವುದು. ಅವರು ಅಲ್ಲಿ ಉರಿಯುತ್ತಿರುವ ಅಗ್ನಿಯ ಇಂಧನವಾಗುವರು. ಅಲ್ಲಿ ಅವರು ಮಾಡಿರುವ ಪ್ರತಿಯೊಂದು ಪಾಪದ ಶಿಕ್ಷೆಯು ಸಿಗಲಿರುವುದು. ಅದಕ್ಕೂ ದೊಡ್ಡ ಶಿಕ್ಷೆಯೆಂದರೆ ಅವರು ತಮ್ಮ ಪ್ರಭುವಿನ ಮುಖದರ್ಶನದಿಂದ ವಂಚಿತಾರಾಗುವರು ಮತ್ತು ಅವರ ಮೇಲೆ ಭಯಂಕರ ಯಾತನೆಯೊಂದು ಬಂದೆರಗವುದು.

## ಅಲ್ಲಾಹನೊಂದಿಗೆ ಸಹಭಾಗಿಗಳನ್ನು ಸೃಷ್ಟಿಸುವುದು ಮಹಾಪಾಪ:

ಆ ನಮ್ಮ ನೈಜ ಪ್ರಭುವು ತನ್ನ ದಿವ್ಯಗ್ರಂಥ ಖುರ್‌ಆನಿನಲ್ಲಿ ಉಲ್ಲೇಖಿಸಿರುವಂತೆ ಒಳಿತು, ಸತ್ಕರ್ಮ, ಪುಣ್ಯ ಹಾಗೂ ಸದಾಚಾರಗಳಲ್ಲಿ ಕೆಲವು ಕಿರಿಯದ್ದಾಗಿದ್ದರೆ ಇನ್ನೂ ಕೆಲವು ಅತೀ ದೊಡ್ಡದಾಗಿರುತ್ತದೆ. ಅಂತೆಯೇ ಅವನು, ತನ್ನ ಆಸ್ಥಾನದಲ್ಲಿ ಅಪರಾಧ ಪಾಪ, ಕುಕರ್ಮಗಳನ್ನೂ ಮಹಾಪಾಪ ಮತ್ತು ಕಿರಿಯ ಪಾಪಗಳನ್ನು ವಿಂಗಡಿಸಿಟ್ಟಾನೆ. ಯಾವ ಪಾಪವು ನಮ್ಮನ್ನು ಅಧಿಕ ಶಿಕ್ಷೆಗೆ ಪಾತ್ರರನ್ನಾಗಿಸುವುದೋ, ಯಾವ ಪಾಪವನ್ನು ನಮ್ಮ ಪ್ರಭು ಎಂದಿಗೂ ಕ್ಷಮಿಸುವುದಿಲ್ಲವೋ, ಯಾವ ಪಾಪ ಮಾಡಿದರೆ ಸದಾ ಕಾಲ ನರಕಾಗ್ನಿಯ ಇಂಧನವಾಗಬೇಕಾಗುವುದೋ ಮತ್ತು ಅಲ್ಲಿ ಸಾವೂ ಸಮೀಪಿಸಲಾರದೋ ಆ ಮಹಾ ಪಾಪವೇ ದೇವ ಸಹಭಾಗಿತ್ವ. ಅವನ ಹೊರತು ಅನ್ಯರ ಮುಂದೆ ತಲೆಬಾಗುವುದು ಮತ್ತು ಅನ್ಯರ ಮುಂದೆ ಕೈ



ಜೋಡಿಸುವುದು, ಅವನ ಹೊರತು ಅನ್ಯರನ್ನು ಆರಾಧ್ಯನನ್ನಾಗಿ ಸ್ವೀಕರಿಸುವುದು, ಸೃಷ್ಟಿಸುವ ಮತ್ತು ಸಾಯಿಸುವ ಹಕ್ಕನ್ನು ಇನ್ನೊಬ್ಬನಿಗೆ ನಿಶ್ಚಯಿಸಿಕೊಳ್ಳುವುದು, ಅನ್ಯರನ್ನು ಅನ್ನ ಪಾನೀಯಗಳನ್ನು ದಯಪಾಲಿಸುವವನನ್ನಾಗಿ, ಲಾಭ ಹಾನಿಗಳನ್ನು ಉಂಟು ಮಾಡುವವನನ್ನಾಗಿ ನಿಶ್ಚಯಿಸಿಕೊಳ್ಳುವುದು ಘೋರ ಪಾಪವಷ್ಟೇ ಅಲ್ಲ, ಅತೀ ದೊಡ್ಡ ಅತ್ಯಾಚಾರವಾಗಿರುವುದು. ಅವರು ದೇವಿ ದೇವತೆಗಳೇ ಆಗಿರಲಿ, ಸೂರ್ಯ, ಚಂದ್ರ, ನಕ್ಷತ್ರಗಳೇ ಆಗಿರಲಿ ಅಥವಾ ದೊಡ್ಡ ದೊಡ್ಡ ಸಂತ ಮಹಾತ್ಮರೇ ಆಗಿರಲಿ ಆ ಏಕ ಮಾತ್ರ ಪ್ರಭುವಿನ ಹೊರತು ಇನ್ನಾರನ್ನೇ ಆಗಲಿ ತನ್ನ ಆರಾಧ್ಯ ದೈವನನ್ನಾಗಿ ಸ್ವೀಕರಿಸಿಕೊಳ್ಳುವುದು ಶಿರ್ಕ್ (ದೇವ ಸಹಭಾಗಿತ್ವ) ಆಗಿದೆ. ಈ ತಪ್ಪನ್ನು ಮಾತ್ರ ಆ ಏಕೈಕ ಆರಾಧ್ಯನು ಎಂದಿಗೂ ಕ್ಷಮಿಸುವುದಿಲ್ಲ. ಅದರ ಹೊರತು ಇನ್ನಾವುದೇ ಪಾಪವನ್ನಾದರೂ ಆತನು ಬಯಸಿದಲ್ಲಿ ಕ್ಷಮಿಸಬಹುದು. ಈ ಪಾಪವನ್ನು ನಮ್ಮ ಸ್ವಂತ ಬುದ್ಧಿಯೇ ಒಪ್ಪಿಕೊಳ್ಳಲಾರದು ಮತ್ತು ಅದನ್ನು ನಾವೇ ಅಸಹ್ಯವಾಗಿ ಕಾಣುತ್ತೇವೆ.

### ಒಂದು ಉದಾಹರಣೆ:

ಒಂದು ವೇಳೆ ನಿಮ್ಮ ಪತ್ನಿಯು ಮಹಾ ಜಗಳಗಂಟಿಯಾಗಿದ್ದು ಮಾತು ಮಾತಿಗೂ ಬೈಯ್ಯುತ್ತಿದ್ದರೆ, ಹೇಳಿದ ಒಂದು ಮಾತನ್ನೂ ಕೇಳುವವಳಲ್ಲದಿದ್ದರೆ ನೀವು ಅವಳನ್ನು ಮನೆಯಿಂದ ಹೊರಬೀಳುವಂತೆ ಗರ್ಜಿಸಬಹುದು. ಆದಾಗ್ಯೂ ''ನಾನು ನಿಮ್ಮವಳು, ನಿಮ್ಮ ಮನೆ ಹೊಸ್ತಿಲಲ್ಲೇ ಪ್ರಾಣ ಬಿಡುತ್ತೇನೆ ಮತ್ತು ಒಂದು ಕ್ಷಣವೂ ನಿಮ್ಮನ್ನಗಲಿ

ಮನೆಯಿಂದ ಹೊರಹೋಗಲಾರೆ'' ಎಂದು ಒಂದು ಮಾತು ಹೇಳಿದರೆ ನಿಮ್ಮ ಕ್ರೋಧವು ತಣ್ಣಗಾಗಿ ಅಷ್ಟೊಂದು ಕುಪಿತರಾಗಿದ್ದರೂ ಅವಳೊಡನೆ ಜೀವನವನ್ನು ನಿರ್ವಹಿಸುವಲ್ಲಿ ಸಂತುಷ್ಟರಾಗುತ್ತೀರಿ.

ಇದಕ್ಕೆ ವ್ಯತಿರಿಕ್ತವಾಗಿ ನಿಮ್ಮ ಪತ್ನಿ ಅತ್ಯಂತ ಸೌಮ್ಯತೆಯಿಂದ ನಿಮ್ಮ ಸೇವೆ ಮಾಡುತ್ತಿದ್ದು, ನಿಮ್ಮ ಆಜ್ಞೆಯ ಪಾಲನೆಯಲ್ಲೇ ನಿರತವಾಗಿದ್ದು, ಪ್ರತಿಕ್ಷಣ ನಿಮ್ಮನ್ನು ಸಲಹುತ್ತಿದ್ದರೆ, ನೀವು ಮನೆಗೆ ತಲುಪಲು ಅರ್ಧರಾತ್ರಿಯಾಗಿದ್ದರೂ ನಿಮ್ಮ ಪ್ರತೀಕ್ಷೆಯಲ್ಲಿ ಕುಳಿತ್ತಿದ್ದರೆ, ನಿಮಗೆ ರುಚಿ ರುಚಿಯಾದ ಅಡಿಗೆ ಮಾಡಿಕೊಡುತ್ತಾ ಬಿಸಿಬಿಸಿಯಾಗಿ ಉಣಬಡಿಸುತ್ತಿದ್ದು ಯಾವಾಗಲೂ ನಿಮ್ಮೊಂದಿಗೆ ಪ್ರೀತಿಯ ಮಾತುಗಳನ್ನಾಡುತ್ತಿದ್ದರೆ ಮತ್ತು ಒಂದೊಮ್ಮೆ ಅವಳು ನೀವು ನನ್ನ ಪತಿರಾಯರಾಗಿದ್ದೀರೇನೋ ಸರಿ, ಆದರೆ ನಿಮ್ಮೊಬ್ಬರಿಂದ ನನಗೆ ಸಮಾಧಾನವಾಗುವುದಿಲ್ಲ. ಆದ್ದರಿಂದ ಪಕ್ಕದ್ಮನೆಯವನನ್ನೂ ನನ್ನ ಪತಿಯಾಗಿ ಸ್ವೀಕರಿಸಿದ್ದೇನೆ'' ಎಂದು ಹೇಳಿದರೆ, ನಿಮ್ಮಲ್ಲಿ ಸ್ವಲ್ಪವಾದರೂ ಲಜ್ಜೆ ಇದ್ದಲ್ಲಿ, ಮನುಷ್ಯತ್ವ ನಿಮ್ಮಲ್ಲಡಗಿದ್ದರೆ ಮತ್ತು ಬಿಸಿರಕ್ತವು ನಿಮ್ಮಲ್ಲಿ ಹರಿಯುತ್ತಿದ್ದರೆ ಎಷ್ಟು ಮಾತ್ರಕ್ಕೂ ನೀವು ಈ ಮಾತನ್ನು ಸಹಿಸಿಕೊಳ್ಳಲಾರಿರಿ. ನಿಮ್ಮ ಪತ್ನಿಯ ಕೊಲೆ ಮಾಡುವಿರಿ ಇಲ್ಲವೇ ಸ್ವತಃ ಆತ್ಮಹತ್ಯೆ ಮಾಡಿಕೊಳ್ಳುವಿರಿ.

ಹೀಗಾಗುವುದಾದರೂ ಏಕೆ? ಯಾಕೆಂದರೆ, ನೀವು ನಿಮ್ಮ ಪತ್ನಿಗಾಗಿ ಯಾವುದೇ ಸಹಭಾಗಿಯನ್ನು ಸಹಿಸಿಕೊಳ್ಳಲಾರಿರಿ. ಕೇವಲ ಒಂದು ವೀರ್ಯಾಣುವಿನಿಂದ ಸೃಷ್ಟಿಯಾಗಿರುವ ನೀವೇ ನಿಮ್ಮೊಂದಿಗೆ



ಸಹಭಾಗಿತ್ವವನ್ನು ಸಹಿಸಿಕೊಳ್ಳಲಾರಿರೆಂದಾರೆ ಆ ಒಂದು ಅಪವಿತ್ರ ಹನಿಯಿಂದ ಮನುಷ್ಯನನ್ನು ಸೃಷ್ಟಿಸಿರುವ ನಮ್ಮ ಪ್ರಭು ಹೇಗೆ ತಾನೇ ತನ್ನೊಂದಿಗೆ ಸಹಭಾಗಿತ್ವವನ್ನು ಸಹಿಸಿಕೊಳ್ಳಲು ಸಾಧ್ಯ? ಅವನೊಂದಿಗೆ ಅನ್ಯರೂ ಆರಾಧನೆಗೆ ಯೋಗ್ಯರಾಗುವರೇ ? ನಮ್ಮ ಎಲ್ಲ ಅವಶ್ಯಕತೆಗಳನ್ನು ಈಡೇರಿಸುವವನು ಅವನೇ. ಯಾವ ರೀತಿ ಒಬ್ಬ ವೇಶ್ಯೆ ತನ್ನ ಮಾನ ಮರ್ಯಾದೆಯಲ್ಲಿರದೇ ಬಂದು ಹೋಗುವ ಎಲ್ಲಾ ಗಂಡಸರಿಗೂ ತನ್ನ ಮೇಲೆ ಅಧಿಕಾರ ನೀಡುವುದರಿಂದ ಅವಳು ಎಂದಿಗೂ ನಿಂದನೆಗೊಳಗಾಗುತ್ತಾಳೆ. ಅದೇ ರೀತಿ ಯಾವ ವ್ಯಕ್ತಿಯು ತನ್ನ ಪ್ರಭುವಿನೊಂದಿಗೆ ಸಹ ಭಾಗಿತ್ವವನ್ನು ನಿಶ್ಚಯಿಸಿಕೊಳ್ಳುವನೋ ಇಲ್ಲವೇ ಅವನ ಹೊರತು ಅನ್ಯರನ್ನು ಆರಾಧಿಸುವನೋ ಆ ವ್ಯಕ್ತಿಯು ತನ್ನ ಪ್ರಭುವಿನ ದೃಷ್ಟಿಯಲ್ಲಿ ಇನ್ನೂ ನೀಚನಾಗಿರುವನು. ಆ ಆರಾಧ್ಯನು ದೇವತೆಯ ರೂಪದಲ್ಲೇ ಇರಲಿ ಅಥವಾ ಮೂರ್ತಿಯ ರೂಪದಲ್ಲೇ ಇರಲಿ ಅಥವಾ ಇನ್ನಾವುದೇ ರೂಪದಲ್ಲಿರಲಿ ಸಹಭಾಗಿತ್ವವು ಎಂದಿಗೂ ಸಲ್ಲದು.

## ಪವಿತ್ರ ಖುರ್‌ಆನಿನಲ್ಲಿ ಮೂರ್ತಿಯ ಪೂಜೆಯ ನಿಷೇಧ

ಪವಿತ್ರ ಕುರ್‌ಆನ್‌ನಲ್ಲಿ ಯೋಚಿಸತಕ್ಕಂಥ ಒಂದು ಉದಾಹರಣೆಯನ್ನು ಪ್ರಸ್ತುತಪಡಿಸಲಾಗಿದೆ.

''ನೀವು ಅಲ್ಲಾಹನನ್ನು ಬಿಟ್ಟು ಯಾವ ಆರಾಧ್ಯರನ್ನು ಪ್ರಾರ್ಥಿಸುತ್ತೀರೋ ಅವರೆಲ್ಲರೂ ಒಟ್ಟಾಗಿ ಒಂದು ನೊಣವನ್ನೂ ಸೃಷ್ಟಿಸಲಾರರು, ಮಾತ್ರವಲ್ಲ ನೊಣವು ಅವರಿಂದೇನನ್ನಾದರೂ ಕಸಿದು

**ಕೊಂಡೊಯ್ದರೆ ಅವರಿಗೆ ಅದನ್ನು ಬಿಡಿಸಿಕೊಳ್ಳಲಿಕ್ಕೂ ಸಾಧ್ಯವಾಗದು. ಸಹಾಯಾರ್ಥಿ ಗಳೂ ದುರ್ಬಲರು ಯಾರಿಂದ ಸಹಾಯ ಬೇಡಲಾಗುತ್ತದೋ ಅವರೂ ದುರ್ಬಲರು'' (ಅಲ್ ಹಜ್ 22:73).**

ಎಷ್ಟು ಉತ್ತಮ ಉದಾಹರಣೆ ಅಲ್ಲವೇ ? ಸೃಷ್ಟಿಕರ್ತನಂತೂ ಕೇವಲ ಅಲ್ಲಾಹನಾಗಿದ್ದಾನೆ. ಮೂರ್ತಿಗಳನ್ನು ನಾವು ನಮ್ಮ ಕೈಯ್ಯಾರೆ ಸೃಷ್ಟಿಸುತ್ತೇವೆ. ಈ ಮೂರ್ತಿಗಳಲ್ಲಿ ಸ್ವಲ್ಪವಾದರೂ ತಿಳುವಳಿಕೆ ಇದ್ದಲ್ಲಿ ಅವೂ ನಮ್ಮನ್ನು ಆರಾಧಿಸುತ್ತಿದ್ದುವೇನೋ?

## ಮತಿಭ್ರಾಂತ ಹೇಳಿಕೆ:

ಕೆಲವರ ಹೇಳಿಕೆ ಈ ರೀತಿ ಇರುತ್ತದೆ ''ನಾವು ಅವುಗಳನ್ನೆಲ್ಲ ಪೂಜಿಸಲು ಕಾರಣ ಅವುಗಳ ಮೂಲಕವೇ ನಾವು ನಮ್ಮ ಪ್ರಭುವಿನ ಮಾರ್ಗವನ್ನು ಕಂಡುಕೊಂಡೆವು ಮತ್ತು ಅವುಗಳ ಮೂಲಕವೇ ನಮ್ಮ ಪ್ರಭು ನಮ್ಮ ಮೇಲೆ ದಯೆ ತೋರಿದ್ದಾನೆ'' ಎನ್ನುವರು. ಈ ತರ್ಕವು ಯಾವ ರೀತಿಯಿದೆ ಎಂದರೆ ಒಬ್ಬ ಕೂಲಿ ಕೆಲಸದವನ ಬಳಿ ರೈಲಿನ ಬಗ್ಗೆ ವಿಚಾರಿಸಿ, ಅವನಿಗೆ ಅದರ ಬಗ್ಗೆ ತಿಳಿದಾಗ ರೈಲಿನ ಬದಲು ಕೂಲಿಯ ಮೇಲೆ ಸವಾರನಾಗಿ ''ನನಗೆ ರೈಲಿನ ಬಗ್ಗೆ ತಿಳಿಸಿದವನು ಆ ಕೂಲಿಯವನಲ್ಲವೇ ?'' ಎಂದ ಹಾಗಾಯಿತು. ಆದ ಕಾರಣ ಸರಿಯಾದ ದಿಕ್ಕು ಮತ್ತು ದಾರಿಯನ್ನು ತೋರಿಸಿದವನನ್ನು ಆರಾಧಿಸುವುದು ಮತ್ತು ಕೂಲಿಯ ಮೇಲೆ ಸವಾರನಾಗುವುದು ಎರಡೂ ಒಂದೇ.

ಕೆಲವು ಸಹೋದರರು, ಈ ರೀತಿ ಹೇಳುವರು ''ನಾವು ಕೇವಲ ನಮ್ಮ ಧ್ಯಾನವನ್ನು ಕೇಂದ್ರೀಕರಿಸಲು ಈ ರೀತಿ ಮಾಡುತ್ತೇವೆ'' ಇದು ಹೇಗಾಯಿತೆಂದರೆ ತಂದೆಯನ್ನು ಸ್ಮರಿಸಲು ನಾಯಿಯನ್ನು ಗಂಭೀರವಾಗಿ



ವೀಕ್ಷಿಸುವಂತಾಯಿತು. ತಂದೆಗೂ ನಾಯಿಗೂ ವ್ಯತ್ಯಾಸವಿಲ್ಲವೇ ? ಅದೇ ರೀತಿ ಈ ದುರ್ಬಲ ಮೂರ್ತಿಗೂ ಆ ಶಕ್ತಿಶಾಲಿ, ಪರಮ ದಯಾಳು, ಕರುಣಾಮಯಿ ಪ್ರಭುವಿಗೂ ವ್ಯತ್ಯಾಸವಿಲ್ಲವೇ ? ಇದರಿಂದ ಧ್ಯಾನ ಕೇಂದ್ರೀಕೃತಗೊಳ್ಳುವುದೋ ಅಥವಾ ವಿಚಲಿತಗೊಳ್ಳು ವುದೋ?

ನಿಶ್ಚಯವಾಗಿಯೂ ಅಲ್ಲಾಹನೊಂದಿಗೆ ಯಾವುದೇ ರೀತಿಯ ಸಹಭಾಗಿತ್ವವು ಸಲ್ಲದು. ಈ ಮಹಾಪಾಪವನ್ನು ನಮ್ಮ ಪ್ರಭು ಎಂದಿಗೂ ಕ್ಷಮಿಸುವುದಿಲ್ಲ. ಮತ್ತು ಆ ವ್ಯಕ್ತಿಯು ಸದಾ ನರಕದ ಇಂಧನವಾಗಬೇಕಾಗುವುದು.

## ಸರ್ವಶ್ರೇಷ್ಠ ಪುಣ್ಯ ಸತ್ಯ ವಿಶ್ವಾಸ:

ಅಂತೆಯೇ, ಎಲ್ಲದಕ್ಕಿಂತ ಉತ್ತಮ ಒಳಿತು ಆದರ್ಶ ಮತ್ತು ಪುಣ್ಯವೇ ಸತ್ಯವಿಶ್ವಾಸ. ಸರ್ವ ಧರ್ಮಗಳೂ ಸ್ವೀಕರಿಸುವಂತೆ ಒಂದು ದಿನ ಎಲ್ಲವನ್ನು ತ್ಯಜಿಸಿ ಹೋಗಬೇಕಾಗಿದೆ. ಸತ್ತ ಮೇಲೆ ನಮ್ಮ ಸತ್ಯ ವಿಶ್ವಾಸವೊಂದೇ ನಮ್ಮೊಂದಿಗಿರುವುದು. ಅರ್ಹನಿಗೆ ಅವನ ಹಕ್ಕನ್ನು ನೀಡುವವನನ್ನು ಸತ್ಯ ವಿಶ್ವಾಸಿ ಎಂದೂ ಮತ್ತು ಹಕ್ಕನ್ನು ಕಬಳಿಸುವ ಅಥವಾ ನಾಶಗೊಳಿಸುವವನನ್ನು ಪಾತಕ ಎಂದೂ ಹೇಳಬಹುದು. ಮಾನವನ ಮೇಲಿರುವ ಬಾಧ್ಯತೆಗಳಲ್ಲಿ ಅತೀ ದೊಡ್ಡ ಹಕ್ಕು ಆತನ ಸೃಷ್ಟಿಕರ್ತನದ್ದಾಗಿದೆ. ಏಕೆಂದರೆ ಎಲ್ಲದರ ಸೃಷ್ಟಿಕರ್ತ, ಜೀವನ ಮರಣದ ಅಧಿಕಾರವುಳ್ಳ ಆ ಏಕೈಕ ಪ್ರಭುವೇ ಆರಾಧನೆಗೆ ಅರ್ಹನು. ಹೀಗಿರುವಾಗ ಅವನನ್ನು ಮಾತ್ರ ಆರಾಧಿಸುವುದು, ಅವನೊರ್ವನನ್ನೇ

ಲಾಭ ನಷ್ಟಗಳ, ಗೌರವ-ಅವಮಾನಗಳ ಕಾರಣಕರ್ತನನ್ನಾಗಿ ಸ್ವೀಕರಿಸುವುದು ಈ ಜೀವನವನ್ನು ಅವನ ಇಚ್ಛೆ ಮತ್ತು ಆಜ್ಞಾಪಾಲನೆಯೊಂದಿಗೆ ವ್ಯಯಿಸುವುದು, ಅವನನ್ನೇ ನಂಬುವುದು ಮತ್ತು ಅವನ ಮಾತನ್ನು ಪಾಲಿಸುವುದು ಇದುವೇ ಸತ್ಯವಿಶ್ವಾಸ. ಅವನ ಆಜ್ಞಾಪಾಲನೆಯ ವಿನಃ ಮನುಷ್ಯನು ಸತ್ಯವಿಶ್ವಾಸಿಯಾಗಲಾರನು, ಬದಲಾಗಿ ಕಪಟ ವಿಶ್ವಾಸಿ ಎನಿಸಿಕೊಳ್ಳುವನು. ತನ್ನ ಪ್ರಭುವಿನ ಅಧಿಕಾರವನ್ನು ತಿರಸ್ಕರಿಸಿ ಜನರ ಮುಂದೆ ಪ್ರಾಮಾಣಿಕತೆಯನ್ನು ಮೆರೆಯುವ ಉದಾಹರಣೆ ಈ ರೀತಿ ಇದೆ, ಒಬ್ಬ ದರೋಡೆಕೋರ ದರೋಡೆ ಮಾಡಿ ಅತ್ಯಂತ ಧನವಂತನಾಗಿ ಅಂಗಡಿ ಮಾಲೀಕನ ಬಳಿ "ಸಾರ್, ಲೆಕ್ಕದಲ್ಲಿ ನೀವು ಒಂದು ರೂಪಾಯಿ ಹೆಚ್ಚಾಗಿ ನೀಡಿದ್ದೀರಿ ಅದನ್ನು ತೆಗೆದುಕೊಳ್ಳಿ" ಎಂದಂತಾಯಿತು. ಕೋಟ್ಯಾಂತರ ರೂಪಾಯಿಯ ದರೋಡೆಯ ನಂತರ ಒಂದು ರೂಪಾಯಿಯ ಲೆಕ್ಕವನ್ನು ನೀಡುವುದು ಯಾವ ರೀತಿ ಕಪಟ ವಿಶ್ವಾಸವಾಗಿರುವುದೋ ಅದೇ ರೀತಿ ತನ್ನ ಪ್ರಭುವನ್ನು ನಿರಾಕರಿಸಿ ಅನ್ಯರ ಆರಾಧನೆಯನ್ನು ಮಾಡುವುದು ಅದಕ್ಕೂ ಮಿಗಿಲಾದ ಕಪಟ ವಿಶ್ವಾಸ.

ಮನುಷ್ಯ ಕೇವಲ ತನ್ನ ಪ್ರಭುವನ್ನೇ ಆಲಿಸಿ, ಅವನೊರ್ವನನ್ನೇ ಆರಾಧಿಸುವುದು ಮತ್ತು ಅವನಿಂದ ಪಡೆದ ಈ ಜೀವನವನ್ನು ಅವನ ಇಚ್ಛೆ ಮತ್ತು ಆಜ್ಞೆಯ ಪರಿಪಾಲನೆಯೊಂದಿಗೆ ವ್ಯಯಿಸುವುದೇ ನಿಜವಾದ ಅರ್ಥದಲ್ಲಿ ಸತ್ಯ ವಿಶ್ವಾಸ. ಅವನಿಂದ ಪಡೆದ ಈ ಜೀವನವನ್ನು ಅವನ ಆಜ್ಞಾಪಾಲನೆ ಯೊಂದಿಗೆ ವ್ಯಯಿಸುವುದೇ ಧರ್ಮ ಮತ್ತು ಆಜ್ಞೋಲ್ಲಂಘನೆಯೇ ಅಧರ್ಮ.



**ಸತ್ಯಧರ್ಮ**

ಸತ್ಯಧರ್ಮವು ಆದಿಯಿಂದಲೂ ಏಕೈಕವಾಗಿತ್ತು ಮತ್ತು ಅದರ ಶಿಕ್ಷಣವೂ ಒಂದೇ ಆಗಿತ್ತು, ಅದೇನೆಂದರೆ ಆ ಏಕೈಕ ಪ್ರಭುವನ್ನೇ ನಂಬಿ ಅವನ ಆಜ್ಞಾಪಾಲನೆಯನ್ನೇ ಮಾಡಿರಿ. ಎಂಬುದಾಗಿತ್ತು, ಪವಿತ್ರ ಖುರ್‌ಆನಿನಲ್ಲಿ ಈ ರೀತಿ ಹೇಳಲಾಗಿದೆ. **"ಯಾರಾದರೂ ಇಸ್ಲಾಮಿನ ಹೊರತು ಯಾವುದಾದರೂ ಇತರ ಧರ್ಮವನ್ನು ಸ್ವೀಕರಿಸಲಿಚ್ಛಿಸಿದರೆ ಅವನ ಆ ಧರ್ಮವನ್ನು ಎಷ್ಟು ಮಾತ್ರಕ್ಕೂ ಮಾನ್ಯ ಮಾಡಲಾಗದು.** (ಸೂರ ಅಲಿ ಇಮ್ರಾನ್ 3:85).

ಮಾನವನ ದೌರ್ಬಲ್ಯತೆಯೆಂದರೆ ಅವನ ಕಣ್ಣುಗಳು ಒಂದು ನಿರ್ದಿಷ್ಟ ದೂರದವರೆಗೂ ಕಾಣಬಹುದು, ಅವನ ಕಿವಿಗಳು ಒಂದು ನಿರ್ದಿಷ್ಟ ಅಂತರದವರೆಗೂ ಕೇಳಬಹುದು. ಸವಿಯುವ ಮತ್ತು ಸ್ಪರ್ಶ ಶಕ್ತಿಯೂ ಸೀಮಿತವಾಗಿರುವುದು. ಈ ಪಂಚೇಂದ್ರಿಯಗಳಿಂದ ಅವನಿಗೆ ಜ್ಞಾನವು ಲಭಿಸುತ್ತದೆ. ಇದೇ ರೀತಿ ಅವನ ಬುದ್ಧಿ ಶಕ್ತಿಯ ಕಾರ್ಯವು ಸೀಮಿತವಾಗಿದೆ.

ಆ ನಮ್ಮ ಪ್ರಭುವು ನಮ್ಮಿಂದ ಯಾವ ರೀತಿಯ ಜೀವನವನ್ನು ಬಯಸುತ್ತಾನೆ ? ಅವನ ಆರಾಧನಾ ಕ್ರಮವಾದರೂ ಏನು ? ಮರಣಾನಂತರ ಏನಾಗುವುದು ? ಸ್ವರ್ಗ ಮತ್ತು ನರಕಕ್ಕೆ ಕೊಂಡೊಯ್ಯುವ ಕರ್ಮಗಳಾವುವು ? ಇವೆಲ್ಲವನ್ನು ಮನುಷ್ಯನ ಬುದ್ಧಿ ಮತ್ತು ಸ್ವಯಂ ಮನುಷ್ಯನೇ ಕಂಡುಕೊಳ್ಳಲಾರ.

**ದೇವ ಸಂದೇಶವಾಹಕ :**

ಮಾನವರ ಈ ದೌರ್ಬಲ್ಯತೆಯನ್ನು ಪರಿಗಣಿಸಿದ ಪ್ರಭುವು ಮಾನವರ ಮೇಲೆ ಕೃಪೆತೋರಿ ಈ ಪದವಿಗೆ ಯೋಗ್ಯರಾದ

ಮಹಾಪುರುಷರನ್ನು ದೇವದೂತರ ಮುಖಾಂತರ ತನ್ನ ಸಂದೇಶವನ್ನು ಕಳುಹಿಸುತ್ತ, ಮಾನವರು ಜೀವನವನ್ನು ವ್ಯಯಿಸುವ ಮತ್ತು ಆರಾಧನೆಯನ್ನು ಕೈಗೊಳ್ಳುವ ಬಗೆಯನ್ನು ತಿಳಿಸಿಕೊಡಲು ಆರಿಸಿಕೊಂಡನು. ಮತ್ತು ಮಾನವರಿಗೆ ಕೆಲವೊಂದು ವಾಸ್ತವಾಂಶಗಳನ್ನು ತಿಳಿಸಿದನು ಅನ್ಯಥ; ಅವನು ತನ್ನ ಬುದ್ಧಿಶಕ್ತಿಯಿಂದ ಏನನ್ನೂ ಅರಿಯುತ್ತಿರಲಿಲ್ಲ. ಇಂಥ ಮಹಾಪುರುಷರನ್ನು ಮಾರ್ಗದರ್ಶಕ, ಸಂದೇಶವಾಹಕ ಅಥವಾ ಪೈಗಂಬರ್ ಎನ್ನಬಹುದು. ದೇವವಾಣಿಯು ಯಾರ ಮೇಲೆ ಅವತರಿತಗೊಂಡಿದೆಯೋ ಅವರನ್ನು ಅವತಾರ ಎನ್ನುವ ಹಾಗಿದ್ದರೆ ಪೈಗಂಬರರನ್ನು ಅವತಾರ ಎಂದೂ ಕರೆಯಬಹುದು. ಆದರೆ ಇಂದು ಅವತಾರ ಎಂಬುದನ್ನು ಸ್ವಯಂ ಪ್ರಭು ಅಥವಾ ಪ್ರಭು ಅವನ ರೂಪದಲ್ಲಿ ಬಂದನು ಎಂದು ಪರಿಗಣಿಸಲಾಗುತ್ತದೆ ಇದೊಂದು ಮೂಢ ನಂಬಿಕೆ ಮತ್ತು ಮಹಾಪಾಪವಾಗಿದೆ. ಈ ಮೂಢನಂಬಿಕೆಯೇ ಜನರನ್ನು ನೈಜ ಪ್ರಭುವಿನ ಆರಾಧನೆಯಿಂದ ಸರಿಸಿ ಮೂರ್ತಿ ಪೂಜೆಯ ಸುಳಿಯಲ್ಲಿ ಸಿಲುಕಿಸಿತು.

ಮಾನವರಿಗೆ ಸತ್ಪಥವನ್ನು ತೋರಲು ಅವರ ನಡುವೆಯೇ ಅಲ್ಲಾಹನು ಆರಿಸಿಕೊಂಡಿರುವ ಆ ಮಹಾಪುರುಷರನ್ನು ನಬಿ (ಮಾರ್ಗದರ್ಶಕ) ಅಥವಾ ರಸೂಲ್ (ಸಂದೇಶವಾಹಕ) ಎನ್ನಲಾಗುತ್ತದೆ. ಇವರು ಪ್ರತಿಯೊಂದು ಪ್ರದೇಶ ಮತ್ತು ಪ್ರತಿಯೊಂದು ಕಾಲಕ್ಕೂ ಬಂದಿರುವರು.

ಅವರೆಲ್ಲರೂ ಕೇವಲ ಏಕೈಕ ಪ್ರಭುವನ್ನು ನಂಬಿ, ಆತನ ಆರಾಧನೆಯನ್ನು ಮಾಡುತ್ತ ಅವನ ಇಚ್ಛೆಯಂತೆ ಜೀವನವನ್ನು ನಡೆಸುವ ಬಗೆಯನ್ನು (ಧಾರ್ಮಿಕ ಕಾನೂನು) ತಿಳಿಸಿಕೊಡಲು ಬಂದರು. ಮತ್ತು



ಅವುಗಳ ಪಾಲನೆಯ ಆದೇಶವನ್ನೂ ನೀಡಿದರು. ಅವರಲ್ಲಿ ಯಾವ ಸಂದೇಶವಾಹಕನೂ ಆ ಏಕೈಕ ಆರಾಧ್ಯನ ಹೊರತು ಅನ್ಯರ ಆರಾಧನೆಯ ಕಡೆಗೆ ಕರೆ ನೀಡಲಿಲ್ಲ. ವ್ಯತಿರಿಕ್ತವಾಗಿ ಅವರು ಹೆಚ್ಚಾಗಿ ಈ ಮಹಾ ಪಾಪದಿಂದಲೇ ಜನರನ್ನು ತಡೆದರು. ಅವರ ಈ ಸತ್ಯದ ಮೇಲೆ ಜನರು ವಿಶ್ವಾಸವಿರಿಸಿ ಸತ್ಪಥದೆಡೆಗೆ ನಡೆದರು.

## ಮೂರ್ತಿ ಪೂಜೆಯ ಆರಂಭ:

ಹೀಗೆ ಬಂದ ಸಂದೇಶವಾಹಕರುಗಳು ಮತ್ತು ಅವರ ಅನುಯಾಯಿಗಳೆಲ್ಲರೂ ಮಾನವರೇ. ಅವರಿಗೂ ಸಾವು ಖಚಿತವಾಗಿತ್ತು ಮರಣವಿಲ್ಲದವನು ಕೇವಲ ಅಲ್ಲಾಹ್. ಇಂಥ ನಬಿ ಅಥವಾ ಸಂದೇಶವಾಹಕರ ಮರಣದ ನಂತರ ಅವರ ಅನುಯಾಯಿಗಳು ಅವರನ್ನು ತುಂಬಾ ನೆನಸಿಕೊಳ್ಳುತ್ತಿದ್ದರು ಮತ್ತು ಆ ನೆನಪೇ ಅವರನ್ನು ದುಃಖಕ್ಕೀಡುಮಾಡುತ್ತಿತ್ತು. ಅವರು ತುಂಬಾ ನೊಂದುಕೊಳ್ಳುತ್ತಿದ್ದರು. ಶೈತಾನನಿಗೆ ಇದೊಂದು ನೆಪವಾಯಿತು. ಅವನು ಮಾನವರ ಆದ್ಯ ಶತ್ರು. ಮನುಷ್ಯರ ಪರೀಕ್ಷಾರ್ಥವಾಗಿ ಅವರನ್ನು ದಾರಿಗೆಡಿಸುವ ಮತ್ತು ಅವರ ಮನಸ್ಸಿನಲ್ಲಿ ನೀಚ ಭಾವನೆಗಳನ್ನು ಹುಟ್ಟಿಸುವ ಶಕ್ತಿಯನ್ನು ಶೈತಾನನಿಗೆ ಅಲ್ಲಾಹನು ನೀಡಿರುವನು, ತನ್ಮೂಲಕ ತನ್ನ ಸೃಷ್ಟಿಕರ್ತ ಪ್ರಭುವನ್ನು ಅನುಸರಿಸುವವನು ಯಾರು ಮತ್ತು ಶೈತಾನನ ದುಷ್ಪ್ರೇರಣೆಗೊಳಗಾಗುವವನು ಯಾರೆಂದು ಪರೀಕ್ಷಿಸಲು.

ಶೈತಾನನು ಮಾನವರ ಬಳಿಗೆ ಬಂದು ಈ ರೀತಿ ಹೇಳಿದನು. ''ನಿಮಗಂತೂ ನಿಮ್ಮ ಮಹಾಗುರು (ರಸೂಲ್ ಅಥವಾ ನಬಿ) ಗಳ ಮೇಲೆ ಅತಿಯಾದ ಪ್ರೇಮವಿದೆ. ಅವರ ಮರಣದ ನಂತರ ನಿಮ್ಮ

ದೃಷ್ಟಿಗಳಿಂದ ಅವರು ಕಣ್ಮರೆಯಾಗಿರುವರು. ಆದ್ದರಿಂದ ನಾನು ನಿಮಗೊಂದು ಮೂರ್ತಿಯನ್ನು ರಚಿಸಿಕೊಡುವೆನು. ಅದನ್ನು ಕಂಡು ನೀವು ಸಂತುಷ್ಟರಾಗಿರಬಹುದು''. ಎಂದು ಶೈತಾನನು ವಿಗ್ರಹವನ್ನು ನಿರ್ಮಿಸಿದನು ಅವರು ಅದನ್ನು ಮನಸ್ಸಾದಾಗಲೆಲ್ಲಾ ನೋಡುತ್ತಿದ್ದರು. ಒಮ್ಮೆ ಅವರ ಮನದಲ್ಲಿ ಮೂರ್ತಿಯೆಡೆಗೆ ಒಲವು ತುಂಬಿಕೊಂಡಾಗ ಶೈತಾನನು ಇನ್ನೂ ಮುಂದುವರೆದು ನೀವು ಆ ಮೂರ್ತಿಗೆ ತಲೆಬಾಗಿದರೆ ಆ ಮೂರ್ತಿಯಲ್ಲಿ ನೀವು ನಿಮ್ಮ ಪ್ರಭುವನ್ನು ಕಾಣುವಿರಿ ಎಂದು ಪ್ರೇರೇಪಿಸಿದನು. ಮೊದಲೇ ಮನದಲ್ಲಿ ಮೂರ್ತಿಯೆಡೆಗೆ ಎಲ್ಲಿಲ್ಲದ ಒಲವನ್ನು ತುಂಬಿಕೊಂಡಿದ್ದ ಜನ ಆ ಮೂರ್ತಿಗಳಿಗೆ ತಲೆಬಾಗಿಸುವುದಷ್ಟೇ ಅಲ್ಲ, ಪೂಜೆ ಮಾಡುವುದನ್ನು ಆರಂಭಿಸಿದರು. ಆರಾಧನೆಗೆ ಯೋಗ್ಯನಾದವನು ಕೇವಲ ಅಲ್ಲಾಹನಾಗಿರುವಾಗ ಜನರು ಮೂರ್ತಿಯನ್ನೂ ಪೂಜಿಸಲಾರಂಭಿಸಿದರು ಮತ್ತು ಶಿರ್ಕ್ (ದೇವಸಹಭಾಗಿತ್ವ) ಎಂಬ ಮಹಾಪಾಪದಲ್ಲಿ ಸಿಲುಕಿಕೊಂಡರು.

## ಸಮಸ್ತ ಜಗತ್ತಿಗೆ ಶ್ರೇಷ್ಠ ಜೀವಿಯಾದ ಮನುಷ್ಯ:

ಸಮಸ್ತ ಜಗತ್ತಿನ ನಾಯಕ (ಮನುಷ್ಯ) ಕಲ್ಲು ಮಣ್ಣಿನ ಮುಂದೆ ತಲೆಬಾಗಿಸಲು ಆರಂಭಿಸಿದಂದಿನಿಂದ ಅವಮಾನಿತನಾಗಿ ತನ್ನ ಪ್ರಭುವಿನ ಕಡೆಯಿಂದ ನಿಂದನೆಗೊಳಗಾದನು ಮತ್ತು ಶಾಶ್ವತವಾಗಿ ನರಕದ ಇಂಧನವಾದನು. ಆ ವೇಳೆಯಲ್ಲಿ ಅಲ್ಲಾಹನು ಪುನಃ ಸಂದೇಶವಾಹಕರನ್ನು ಕಳುಹಿಸುವ ಮೂಲಕ ಮೂರ್ತಿ ಪೂಜೆ ಮತ್ತು ಅಲ್ಲಾಹನ ಹೊರತು ಇತರರ ಆರಾಧನೆಯನ್ನು ನಿಷೇಧಿಸಿದನು. ಕೆಲವರು ಈ ಸಂದೇಶವಾಹಕರ ಮಾತನ್ನು ನಂಬಿದರೆ ಇನ್ನು ಕೆಲವರು ಅವರನ್ನು ಅವಹೇಳನ ಮಾಡಲಾರಂಭಿಸಿದರು. ವಿಶ್ವಾಸವಿರಿಸುವವರಿಂದ ಅಲ್ಲಾಹನು ಪ್ರಸನ್ನನಾಗುತ್ತಿದ್ದನು. ಮತ್ತು ಅವರ



ಉಪದೇಶವನ್ನು ನಿಂದಿಸುತ್ತಿದ್ದವರ ಮೇಲೆ ಆಕಾಶದಿಂದ ವಿನಾಶದ ತೀರ್ಮಾನವಾಗುತ್ತಿತ್ತು.

## ಸಂದೇಶವಾಹಕರ ಶಿಕ್ಷಣ:

ಒಬ್ಬರ ಹಿಂದೊಬ್ಬರಂತೆ ನಬೀ (ಮಾರ್ಗದರ್ಶಕ) ಮತ್ತು ರಸೂಲ (ಸಂದೇಶವಾಹಕರು) ಬರುತ್ತಲೇ ಇದ್ದರು. ಅವರು ತಂದಿದ್ದ ಧರ್ಮದ ಆಧಾರವು ಒಂದೇ ಇರುತ್ತಿತ್ತು. ಅವರು ಒಂದೇ ಧರ್ಮದೆಡೆಗೆ ಆಹ್ವಾನಿಸುತ್ತಿದ್ದರು. ಏಕ ದೇವನ ಮೇಲೆ ವಿಶ್ವಾಸವಿರಿಸಿ ಯಾರನ್ನೂ ಅವನ ವ್ಯಕ್ತಿತ್ವ ಮತ್ತು ಗುಣ ವಿಶೇಷಗಳಲ್ಲಿ ಸಹಭಾಗಿಯನ್ನಾಗಿ ಮಾಡದಿರಿ. ಅವನ ಆರಾಧನೆಯಲ್ಲಿ ಯಾರನ್ನೂ ಸಹಭಾಗಿಯನ್ನಾಗಿ ಮಾಡದಿರಿ, ಅವನ ಎಲ್ಲ ಸಂದೇಶವಾಹಕರ ಮೇಲೆ ವಿಶ್ವಾಸವಿರಿಸಿರಿ.

## ಅವನ ದೇವಚರರಲ್ಲಿ ವಿಶ್ವಾಸ :

ಅನ್ನ ಪಾನೀಯವನ್ನು ಸೇವಿಸದಂತಹ, ನಿದ್ರೆಯೂ ಬಾಧಿಸದಂತಹ ತಮ್ಮ ಪ್ರತಿಯೊಂದು ಕಾರ್ಯದಲ್ಲಿ ಪ್ರಭುವಿನ ಆಜ್ಞೆಯನ್ನು ಪಾಲಿಸುವಂತಹ, ಪ್ರಭುವಿನ ಪವಿತ್ರ ಸೃಷ್ಟಿಗಳಲ್ಲೊಂದಾದ ದೇವಚರರ ಮೇಲೆ ವಿಶ್ವಾಸವಿರಿಸಿರಿ.

## ಅಲ್ಲಾಹನ ಗ್ರಂಥಗಳಲ್ಲಿ ವಿಶ್ವಾಸ :

ಅಲ್ಲಾಹನು ದೇವಚರರ ಮುಖಾಂತರ ಕಳುಹಿಸಿರುವ ದಿವ್ಯವಾಣಿ ಅಥವಾ ಗ್ರಂಥದ ಮೇಲೆ ವಿಶ್ವಾಸವಿರಿಸಿರಿ,

## ಪರಲೋಕದಲ್ಲಿ ವಿಶ್ವಾಸ:

ಮರಣದ ನಂತರ ಪುನಃ ಎಬ್ಬಿಸಲ್ಪಟ್ಟು ಇಹಲೋಕದ ಕರ್ಮಗಳಿಗನುಸಾರ ಪ್ರತಿಫಲವನ್ನು ನೀಡುವುದರ ಬಗ್ಗೆ ವಿಶ್ವಾಸವಿರಿಸಿರಿ.

## ವಿಧಿಯ ಮೇಲೆ ವಿಶ್ವಾಸ:

ಒಳ್ಳೆಯ ಹಾಗೂ ಕೆಟ್ಟ ವಿಧಿಗಳೆಲ್ಲಾ ಪ್ರಭುವಿನ ವತಿಯಿಂದಲೇ ನಡೆಯುವುದು ಎಂಬುದರ ಬಗ್ಗೆ ವಿಶ್ವಾಸವಿರಿಸಿರಿ ಮತ್ತು ನಾನು ಈಗ ತಂದಿರುವ ಧಾರ್ಮಿಕ ವಿಧಿ ಹಾಗೂ ಜೀವನ ಪದ್ಧತಿಯನ್ನು ಮಾತ್ರ ಅನುಸರಿಸಿರಿ ಎಂಬುದನ್ನೇ ಎಲ್ಲ ಸಂದೇಶವಾಹಕರೂ ನುಡಿಯುತ್ತಿದ್ದರು.

ಈವರೆಗೆ ಬಂದಿರುವ ಎಲ್ಲ ನಬಿ ಮತ್ತು ಸಂದೇಶವಾಹಕರು ಸತ್ಯವಂತರಾಗಿದ್ದರು. ಅವರ ಮೇಲೆ ಅವತರಿಸಲ್ಪಟ್ಟ ಗಂಥಗಳೆಲ್ಲವೂ ಸತ್ಯವಾಣಿಯಾಗಿ ಅವೆಲ್ಲದರ ಮೇಲೂ ನಮಗೆ ಶ್ರದ್ಧೆ ವಿಶ್ವಾಸವಿದೆ.

ನಾವು ಅವುಗಳಲ್ಲಿ ಭೇಧಬಾವ ಮಾಡುವುದಿಲ್ಲ. ವಸುತ್ತಃ ಯಾರು ಏಕ ದೇವನ ಮೇಲೆ ವಿಶ್ವಾಸವಿರಿಸುವೆಡೆಗೆ ಆಹ್ವಾನಿಸಿದರೋ, ಯಾರ ಶಿಕ್ಷಣದಲ್ಲಿ ಏಕಮಾತ್ರ ಆರಾಧ್ಯನ ಹೊರತು ಅನ್ಯರ ಪೂಜೆ ಅಥವಾ ಸ್ವತಃ ತಮ್ಮ ಪೂಜೆಯನ್ನು ನಿರಾಕರಿಸಲಾಗಿದೆಯೋ ಅವರೆಡೆಗೆ ಸತ್ಯದ ತಕ್ಕಡಿಯು ತೂಗುತ್ತಿದೆ. ಅರ್ಥಾತ್ ಯಾವ ಮಹಾಪುರುಷರು ಮೂರ್ತಿ ಪೂಜೆ ಅಥವಾ ಬಹುದೇವ ವಿಶ್ವಾಸದ ಶಿಕ್ಷಣವನ್ನು ನೀಡುವರೋ ಒಂದೋ ಅವರು ಸಂದೇಶವಾಹಕರಲ್ಲ ಅಥವಾ ಅವರ ಶಿಕ್ಷಣ ಹಾಗೂ ಉಪದೇಶಗಳನ್ನು ಅದಲು ಬದಲು ಮಾಡಲಾಗಿದೆ. ಮಹಮ್ಮದ್ (ಸ) ರವರಿಗಿಂತ ಮುಂಚೆ ಬಂದ ಎಲ್ಲ ಪ್ರವಾದಿಗಳ ಶಿಕ್ಷಣವನ್ನು ಅದಲು ಬದಲು ಮಾಡಲಾಗಿದೆ. ಮತ್ತು ಗ್ರಂಥಗಳನ್ನಂತೂ ನಂಬಲಾಗದಷ್ಟು ಬದಲಾಯಿಸಲಾಗಿದೆ.



## ಅಂತಿಮ ಸಂದೇಶವಾಹಕ ಮೊಹಮ್ಮದ್ (ಸ)

ಪ್ರತಿಯೊಬ್ಬ ರಸೂಲ (ಸಂದೇಶವಾಹಕ) ಅಥವಾ ನಬಿಗಳ ಮೂಲಕ ಮತ್ತು ಅವರಿಗೆ ಅವತರಿಸಲ್ಪಟ್ಟ ಗ್ರಂಥಗಳಲ್ಲಿ ಬರಲಿರುವ ಅಂತಿಮ ನಬಿಯ ಬಗ್ಗೆ ಭವಿಷ್ಯವಾಣಿಯನ್ನು ನುಡಿಯಲಾಗಿರುವುದು ಒಂದು ಅತ್ಯಮೂಲ್ಯ ಸತ್ಯ. ಅಂತಿಮ ಸಂದೇಶವಾಹಕರ ಆಗಮನದ ಬಳಿಕ ಮತ್ತು ಅವರನ್ನು ಗುರುತಿಸಿಕೊಂಡ ಕ್ಷಣದಿಂದ ಪ್ರಾಚೀನ ಪದ್ದತಿ ಹಾಗೂ ಧಾರ್ಮಿಕ ಕಾನೂನನ್ನು ತ್ಯಜಿಸಿ ಅವರ ಮಾತನ್ನೇ ನಂಬಿ ಅವರ ಮೂಲಕ ಜಾರಿಗೆ ಬಂದ ಧರ್ಮ ಮತ್ತು ಅವರಿಗೆ ಅವತರಿಸಲಾದ ಗ್ರಂಥದ ಮೇಲೆ ವಿಶ್ವಾಸವಿರಿಸಿ ಅದನನ್ನುಸರಿಸುವಂತೆ ಈ ಮೊದಲೇ ಭವಿಷ್ಯ ನುಡಿಯಲಾಗಿದೆ. ಪ್ರಾಚೀನ ಗ್ರಂಥಗಳಲ್ಲಿ ಬೃಹತ್ ಪ್ರಮಾಣದ ಅದಲು ಬದಲುಗಳನ್ನು ಮಾಡಲಾದಾಗ್ಯೂ ಆ ನಮ್ಮ ಪ್ರಭುವು ಅಂತಿಮ ರಸೂಲರ (ಸಂದೇಶವಾಹಕರ) ಆಗಮನದ ಸಂದೇಶವನ್ನು ಬದಲಾಗಲು ಬಿಟ್ಟಿಲ್ಲ ಮತ್ತು ಈ ಭವಿಷ್ಯವಾಣಿಯ ಬಗ್ಗೆ ಯಾರೂ ಸಹ ನಮಗೆ ತಿಳಿದಿರಲಿಲ್ಲವೆಂದು ಹೇಳದಂತೆ ಸುರಕ್ಷಿತಗೊಳಿಸಿರುವನು ಇದು ಸಹ ಇಸ್ಲಾಂ ಸತ್ಯವೆಂಬುದಕ್ಕೆ ಸಾಕ್ಷಿಯಾಗಿದೆ. ವೇದಗಳಲ್ಲಿ ಆತನ ಹೆಸರನ್ನು ನರಾಶಂಸ ಎಂದೂ, ಪುರಾಣಗಳಲ್ಲಿ ಕಲ್ಕಿ ಅವತಾರ ಎಂದೂ, ಬೈಬಲಿನಲ್ಲಿ ಫಾರ್ಕಲೀಟ್ ಮತ್ತು ಅಹ್ಮದ್ ಎಂದೂ, ಬೌದ್ಧ ಗ್ರಂಥಗಳಲ್ಲಿ ಅಂತಿಮ ಬುದ್ಧ ಎಂದೂ ವರ್ಣಿಸಲಾಗಿದೆ.

ಈ ಎಲ್ಲ ಧಾರ್ಮಿಕ ಗ್ರಂಥಗಳಲ್ಲಿ ಮಹಮ್ಮದ್ (ಸ) ರವರ ಜನ್ಮಸ್ಥಳ, ಜನ್ಮತಿಥಿ, ಕಾಲ ಇನ್ನೂ ಅನೇಕ ಲಕ್ಷಣಗಳನ್ನು ವಿವರಿಸಲಾಗಿದೆ.

## ಮುಹಮ್ಮದ್ (ಸ) ರವರ ಜೀವನ ಪರಿಚಯ

ಸುಮಾರು ಸಾವಿರದ ನಾನೂರ ಐವತ್ತು ವರ್ಷಗಳ ಹಿಂದೆ ಸೌದಿ ಅರೇಬಿಯಾ ದೇಶದ ಮಕ್ಕಾ ಪಟ್ಟಣದಲ್ಲಿ ಅಂತಿಮ ಋಷಿ ಮುಹಮ್ಮದ್ ರಸೂಲುಲ್ಲಾಹ್ ಸಲ್ಲಲ್ಲಾಹು ಅಲೈಹಿವ ಸಲ್ಲಂರವರ ಜನನವಾಯಿತು. ಅವರ ಜನನದ ಕೆಲವು ತಿಂಗಳ ಹಿಂದಷ್ಟೇ ಅವರ ತಂದೆಯು ಸಾವನ್ನಪ್ಪಿದ್ದರು. ತಾಯಿಯೂ ಬಹಳ ದಿನ ಜೀವಿತರಿರಲಿಲ್ಲ. ಮೊದಲು ಅಜ್ಜ ನಂತರ ಚಿಕ್ಕಪ್ಪನ ಆಸರೆಯಲ್ಲಿ ಬೆಳೆದರು. ಸಮಸ್ತ ಜಗತ್ತಿಗೇ ಶಾಂತಿದೂತರಾಗಿರುವ ಇವರು ಇಡೀ ಮಕ್ಕಾ ನಗರದ ಕಣ್ಮಣಿಯಾಗಿದ್ದರು.

ಅವರ ಬೆಳವಣಿಗೆಯೊಂದಿಗೆ, ಜನರ ಒಲವು ಅವರೆಡೆಗೆ ವೃದ್ಧಿಯಾಗುತ್ತಿತ್ತು. ಅವರನ್ನು ಸತ್ಯಸಂಧ (ಸಾದಿಕ್ ಅಮೀನ್)ಮತ್ತು ಪ್ರಾಮಾಣಿಕ ಎನ್ನಲಾಗುತ್ತಿತ್ತು. ಜನರು ತಮ್ಮ ಅತ್ಯಮೂಲ್ಯ ವಸ್ತುಗಳನ್ನೆಲ್ಲಾ ಅವರ ಬಳಿ ಸುರಕ್ಷಿತವಾಗಿಡಲು ನೀಡುತ್ತಿದ್ದರು. ತಮ್ಮ ಪಾರಂಪರಿಕ ಕಲಹಗಳನ್ನು ಬಗೆಹರಿಸಿಕೊಳ್ಳುತ್ತಿದ್ದರು. ಅಲ್ಲಾಹನ ಪವಿತ್ರ ಭವನ ಕಾಬಾದ ದುರಸ್ತಿ ಕಾರ್ಯ ನಡೆಯುತ್ತಿದ್ದಾಗ ಅದರ ಒಂದು ಮೂಲೆಯಲ್ಲಿ ಪವಿತ್ರ ಕಲ್ಲೊಂದಿತ್ತು. ಅದನ್ನು ಅದರ ಸ್ಥಾನದಲ್ಲಿ ಸ್ಥಾಪಿಸಲು ಮಕ್ಕಾ ನಗರದ ಎಲ್ಲಾ ವಂಶಗಳ ಮುಖಂಡರು ಆ ಕಲ್ಲಿನ ಪವಿತ್ರತೆಯ ಕಾರಣ ಆ ಅಧಿಕಾರವು ತಮಗೇ ಲಭಿಸಬೇಕೆಂದು ಅಪೇಕ್ಷಿಸಿದರು. ಆ ದಿಶೆಯಲ್ಲಿ ಖಡ್ಗಗಳನ್ನೆತ್ತಿಕೊಳ್ಳಲಾಯಿತು. ಆಗ ಒಬ್ಬ ಬುದ್ಧಿವಂತ ಇದನ್ನು ಬಗೆಹರಿಸಲು ಒಂದು ಸಲಹೆಯನ್ನು ಕೊಟ್ಟನು. ''ನಾಳೆ ಈ ಕಾಬಾ ಭವನದೊಳಗೆ ಯಾವ ವ್ಯಕ್ತಿ ಮೊದಲು



ಆಗಮಿಸುವನೋ ಅವನೇ ಈ ವಿಷಯವನ್ನು ನಿರ್ಧರಿಸುವನು ಎಂದು ತೀರ್ಮಾನಿಸಲಾಯಿತು ಎಲ್ಲರೂ ಒಪ್ಪಿಕೊಂಡರು ಅಂತೆಯೇ ಮರುದಿನ ಕಾಬಾವನ್ನು ಪ್ರವೇಶಿಸಿದ ಮೊದಲ ವ್ಯಕ್ತಿ ಮುಹಮ್ಮದ್ (ಸ) ಆಗಿದ್ದರು. ಎಲ್ಲರೂ ಏಕಸ್ವರದಲ್ಲಿ ಮುಹಮ್ಮದ್ (ಸ)ರವರ ನಿರ್ಣಯದ ಬಗ್ಗೆ ಸಂಪೂರ್ಣ ವಿಶ್ವಾಸವಿರಿಸುವೆವೆಂದು ವಾಹ್ ! ವಾಹ್ ! ಸತ್ಯಸಂಧ ಮತ್ತು ಪ್ರಾಮಾಣಿಕನ ನಿರ್ಣಯ ಎಂದು ಶ್ಲಾಘಿಸ ತೊಡಗಿದರು. ಮುಹಮ್ಮದ್ (ಸ) ರವರು ಒಂದು ಬಟ್ಟೆಯನ್ನು ಹಾಸಿ ಅದರ ಮೇಲೆ ಕಲ್ಲನ್ನಿಟ್ಟು ಎಲ್ಲ ವಂಶಜರ ಮುಖಂಡರನ್ನು ಕರೆದು ಬಟ್ಟೆಯ ಎಲ್ಲ ಅಂಚುಗಳನ್ನು ಹಿಡಿದೆತ್ತಿ ಆ ಒಂದು ಮೂಲೆಯ ಬಳಿ ಕೊಂಡೊಯ್ಯಲು ತಿಳಿಸಿದರು. ಅಲ್ಲಿಗೆ ತಲುಪಿದಾಗ ಮುಹಮ್ಮದ್(ಸ) ಸ್ವತಃ ತಮ್ಮ ಕೈಯಾರೆ ಆ ಕಲ್ಲನ್ನೆತ್ತಿ ಅದರ ಸ್ಥಾನದಲ್ಲಿಟ್ಟು ಈ ಕಲಹವನ್ನು ಸಮಾಪ್ತಗೊಳಿಸಿದರು.

ಈ ರೀತಿ ಜನರು ಅವರಿಗೆ ಪ್ರತಿ ಕಾರ್ಯದಲ್ಲೂ ಮುಂದಾಳುತ್ವ ವನ್ನು ವಹಿಸುತ್ತಿದ್ದರು. ಅವರು ಪ್ರಯಾಣಕ್ಕೆಂದು ಹೊರಟರೆ ಜನರು ವ್ಯಾಕುಲರಾಗುತ್ತಿದ್ದರು ಮತ್ತು ಅವರು ಪುನಃ ಮರಳಿದಾಗ ಅವರನ್ನು ಕಂಡು ಬಿಕ್ಕಿ ಬಿಕ್ಕಿ ಅಳುತ್ತಿದ್ದರು.

ಆ ಕಾಲದಲ್ಲಿ ಅಲ್ಲಾಹನ ಭವನ ಕಾಬಾದಲ್ಲಿ 360 ದೇವಿ ದೇವತೆಗಳ ಮೂರ್ತಿಗಳನ್ನು ಇಡಲಾಗಿತ್ತು. ಅರಬ್‌ದೇಶದಲ್ಲಿ ಮೇಲು-ಕೀಳು, ಅಸ್ಪೃಶ್ಯತೆ, ನಾರಿಯರ ಮೇಲೆ ಅತ್ಯಾಚಾರ, ಮದ್ಯ, ಜೂಜು, ಬಡ್ಡಿ ಕಲಹಗಳು, ಬಲತ್ಕಾರ ಇನ್ನೂ ಅನೇಕಾನೇಕ ಪಾಪಗಳು ತುಂಬಿಕೊಂಡಿದ್ದುವು.

## ಸತ್ಯದ ಕರೆ

ಮುಹಮ್ಮದ್ (ಸ)ರವರಿಗೆ 40 ವರ್ಷ ವಯಸ್ಸಾದಾಗ ಅಲ್ಲಾಹನು ತನ್ನ ದೇವಚರರ ಮಾಧ್ಯಮದಿಂದ ಖುರ್‌ಆನ್ ಅವತೀರ್ಣ ಗೊಳಿಸಲು ಆರಂಭಿಸಿದನು. ಮತ್ತು ಅವರಿಗೆ ಸಂದೇಶವಾಹಕರಾಗಿರುವ ಶುಭ ಸಂದೇಶವನ್ನೂ ಮತ್ತು ಜನರನ್ನು ಏಕದೇವತ್ವದ ಕಡೆಗೆ ಆಹ್ವಾನಿಸುವ ಜವಾಬ್ದಾರಿಯನ್ನೂ ವಹಿಸಿದನು.

ಮುಹಮ್ಮದ್ (ಸ)ರವರು ಪರ್ವತದ ತುದಿಯನ್ನು ತಲುಪಿ ಜನರನ್ನು ಕೂಗಿದರು. ಸತ್ಯಸಂಧ, ಪ್ರಾಮಾಣಿಕ ವ್ಯಕ್ತಿಯ ಕೂಗನ್ನು ಕೇಳಿ ಎಲ್ಲರೂ ಮುಗಿಬಿದ್ದರು. ಅವರು (ಸ) ಪ್ರಶ್ನಿಸಿದರು, ''ಒಂದು ವೇಳೆ ಈ ಪರ್ವತದ ಹಿಂದಿನಿಂದ ಒಂದು ದೊಡ್ಡ ಸೈನ್ಯವು ಬರುತ್ತಿದ್ದು ಅದು ನಿಮ್ಮ ಮೇಲೆ ಆಕ್ರಮಣ ಮಾಡಲಿದೆ ಎಂದು ನಾನು ಹೇಳಿದರೆ ನೀವು ನನ್ನ ಮಾತಿನ ಮೇಲೆ ವಿಶ್ವಾಸವಿರಿಸುವಿರಾ ?''

ಅದಕ್ಕುತ್ತರವಾಗಿ ಎಲ್ಲರೂ ''ನಿಮ್ಮ ಮಾತಿನ ಮೇಲೆ ವಿಶ್ವಾಸವಿಡದವರು ಯಾರಿದ್ದಾರೆ ? ನೀವೆಂದೂ ಸುಳ್ಳನ್ನು ಹೇಳಿದವರಲ್ಲ, ಅಷ್ಟೇ ಅಲ್ಲ, ನೀವು ಪರ್ವತದ ಎತ್ತರದಲ್ಲಿ ನಿಂತಿದ್ದು ಇನ್ನೊಂದೆಡೆ ಆಗುತ್ತಿರುವುದನ್ನು ಕಾಣುತ್ತಿರುವಿರಿ'' ಎಂದು ಏಕಸ್ವರದಲ್ಲಿ ಉತ್ತರಿಸಿದರು. ಆ ಕ್ಷಣ ಮುಹಮ್ಮದ್ (ಸ) ನೆರೆದಿದ್ದ ಎಲ್ಲರನ್ನೂ ಇಸ್ಲಾಮಿನೆಡೆಗೆ ಆಹ್ವಾನಿಸಿದರು, ಮೂರ್ತಿ ಪೂಜೆಯಿಂದ ತಡೆದರು ಮತ್ತು ಮರಣದ ನಂತರ ಸಿಗಲಿರುವ ನರಕ್ಕಾಗಿಯ ಶಿಕ್ಷೆಯ ಬಗ್ಗೆ ಎಚ್ಚರಿಸಿದರು.



## ಮನುಷ್ಯನ ದೌರ್ಬಲ್ಯ :

ತನ್ನ ಪೂರ್ವಜರ ತಪ್ಪು ಹೇಳಿಕೆಗಳನ್ನೂ ಅಂಧ ವಿಶ್ವಾಸದಿಂದ ನಂಬಿ ಅನುಸರಿಸುತ್ತಿರುವುದು ಮನುಷ್ಯನ ಅತಿ ದೊಡ್ಡ ದೌರ್ಬಲ್ಯತೆ ಯಾಗಿದೆ. ಮಾನವನ ಬುದ್ಧಿ ಮತ್ತು ತರ್ಕವು ಈ ಎಲ್ಲ ವಾಸ್ತವಿಕತೆಯನ್ನು ನಿರಾಕರಿಸಿದಾಗ್ಯೂ, ಅವನು ತನ್ನ ಪೂರ್ವಜರ ಮಾತುಗಳನ್ನೇ ಅವಲಂಬಿಸಿಕೊಂಡಿದ್ದಾನೆ, ಅದರ ಹೊರತಾಗಿ ಏನಾದರೂ ಮಾಡುವುದಿರಲಿ, ಕೇಳಲೂ ಅವನಿಂದ ಸಾಧ್ಯವಾಗುತ್ತಿಲ್ಲ.

## ಅಡಚಣೆ ಮತ್ತು ಪರೀಕ್ಷೆಗಳು :

ಈ ಕಾರಣದಿಂದಲೇ 40 ವರ್ಷ ಅವರನ್ನು ಗೌರವಿಸಿದಾಗ್ಯೂ ಅವರನ್ನು ಸತ್ಯಸಂಧ ಎಂದು ನಂಬಿದಾಗ್ಯೂ ಮಕ್ಕಾದ ಜನ ಅವರ ಶಿಕ್ಷಣವನ್ನು ತಿರಸ್ಕರಿಸಿದರು. ಅವರು ಜನರನ್ನು ಸತ್ಯದ ಕಡೆಗೆ ಎಷ್ಟು ಆಹ್ವಾನಿಸುತ್ತಿದ್ದರೋ ಜನರು ಅವರನ್ನು ಅಷ್ಟೇ ದ್ವೇಷಿಸತೊಡಗಿದರು. ಕೆಲವರು ಸತ್ಯ ವಿಶ್ವಾಸಿಗಳನ್ನು ಅತಿಯಾಗಿ ಪೀಡಿಸುತ್ತಿದ್ದರು. ಹೊಡೆಯುತ್ತಿದ್ದರು, ಬೆಂಕಿಯಲ್ಲಿ ಮಲಗಿಸುತ್ತಿದ್ದರು, ಕತ್ತಲ್ಲಿ ಹಗ್ಗ ಹಾಕಿ ಎಳೆದಾಡುತ್ತಿದ್ದರು, ಮತ್ತು ಅವರ ಮೇಲೆ ಕಲ್ಲಿನ ಮಳೆಗರೆಯುತ್ತಿದ್ದರು. ಅದಾಗ್ಯೂ ಮುಹಮ್ಮದ್(ಸ)ರವರು ಅವರೆಲ್ಲರಿಗೋಸ್ಕರ ಅಲ್ಲಾಹನಲ್ಲಿ ಪ್ರಾರ್ಥಿಸುತ್ತಿದ್ದರು, ಯಾರೊಡನೆಯೂ ಸೇಡು ತೀರಿಸಿ ಕೊಳ್ಳುತ್ತಿರಲಿಲ್ಲ. ಇಡೀ ರಾತ್ರಿ ತಮ್ಮ ಪ್ರಭುವಿನ ಬಳಿ ಅವರ ಮಾರ್ಗದರ್ಶನಕ್ಕೋಸ್ಕರ ಪ್ರಾರ್ಥನೆ ಮಾಡುತ್ತಿದ್ದರು.

ಒಮ್ಮೆ ಮಕ್ಕಾವಾಸಿಗಳಿಂದ ನಿರಾಶರಾಗಿ ತಾಇಫ್ ನಗರದೆಡೆಗೆ ಹೊರಟರು. ಅಲ್ಲಿನ ಜನ ಆ ಮಹಾಪುರುಷನನ್ನು ನಿಂದಿಸಿದರು ಮತ್ತು

ಕೆಲವು ಪುಂಡ ಹುಡುಗರನ್ನು ಅವರ ಹಿಂದೆ ಬೆನ್ನಟ್ಟಿಸಿದರು, ಅವರನ್ನು ಹೀಯಾಳಿಸಲಾಯಿತು. ಅವರೆಲ್ಲಾ ಎಸೆದ ಕಲ್ಲುಗಳಿಂದ ಮುಹಮ್ಮದ್ (ಸ) ರವರ ಪಾದಾರವಿಂದಗಳು ರಕ್ತಸಿಕ್ತವಾದುವು. ನೋವಿನಿಂದ ಬಳಲಿ ಎಲ್ಲಾದರೂ ಕುಳಿತು ಕೊಂಡರೆ ಅಲ್ಲಿಯೂ ಆ ಹುಡುಗರು ಪುನಃ ಅವರನ್ನೆಬ್ಬಿಸಿ ಹೊಡೆಯುತ್ತಿದ್ದರು. ಈ ಪರಿಸ್ಥಿತಿಯಲ್ಲಿ ಅವರು ನಗರದಿಂದಾಚೆ ಒಂದು ಸ್ಥಳದಲ್ಲಿ ಬಂದು ಕುಳಿತರು. ಅಲ್ಲಿಯೂ ಅವರು ಜನರನ್ನು ಶಪಿಸಲಿಲ್ಲ. ಬದಲಾಗಿ ಅವರು ಈ ರೀತಿ ಪ್ರಾರ್ಥಿಸಿದರು "ಓ ನನ್ನ ಪ್ರಭುವೇ! ಇವರಿಗೆ ತಿಳುವಳಿಕೆ ನೀಡು ಇವರು ಅರಿಯುವುದಿಲ್ಲ" ಎಂದು ಈ ಪವಿತ್ರ ಸಂದೇಶ ಮತ್ತು ದಿವ್ಯವಾಣಿ ಯನ್ನು ತಲುಪಿಸಿದ ಕಾರಣ ತಮ್ಮ ಪ್ರಿಯ ನಗರ ಮಕ್ಕಾದಿಂದ ವಲಸೆ ಹೋಗಬೇಕಾಯಿತು. ಒಂದು ಕಣಿವೆಯಲ್ಲಿ ಮೂರುವರೆ ವರ್ಷಗಳ ಕಾಲ ಬಂಧಿತರಾಗಿರಬೇಕಾಯಿತು. ಬರಿಯ ಸೊಪ್ಪುಗಳನ್ನು ತಿಂದು ಕಾಲ ಕಳೆಯಬೇಕಾಯಿತು. ಕೊನೆಗೆ ಅಲ್ಲಿಂದಲೂ ವಲಸೆ ಹೋಗಿ ಮದೀನಾ ತಲುಪಿದರು. ಅಲ್ಲಿಯೂ ಮಕ್ಕಾದ ವಿರೋಧಿಗಳು ತಂಡೋಪತಂಡಗಳಾಗಿ ಅವರ ಮೇಲೆ ಯುದ್ಧ ಸಾರಿದರು.

## ಸತ್ಯದ ವಿಜಯ :

ಸತ್ಯ ಯಾವತ್ತಿದ್ದರೂ ಜಯಿಸಲೇಬೇಕು. ಇಲ್ಲಿಯೂ ಹಾಗಾಯಿತು 23 ವರ್ಷಗಳ ಕಠಿಣ ಪರಿಶ್ರಮದ ಬಳಿಕ ತಾವು ಎಲ್ಲರ ಮೇಲೆ ವಿಜಯವನ್ನು ಸಾಧಿಸಿದರು. ಸತ್ಯ ಮಾರ್ಗದೆಡೆಗೆ ಅವರ ನಿಸ್ವಾರ್ಥ ಆಮಂತ್ರಣವು ಇಡೀ ಅರಬ್ ದೇಶವನ್ನು ಇಸ್ಲಾಂ ಎಂಬ ತಣ್ಣನೆಯ ನೆರಳಲ್ಲಿ ನಿಲ್ಲಿಸಿತು ಮತ್ತು ಪ್ರಪಂಚದೆಲ್ಲೆಡೆಯೂ ಕ್ರಾಂತಿ ಹರಡಿತು,



ಮೂರ್ತಿ ಪೂಜೆಯನ್ನು ತಡೆಹಿಡಿಯಲಾಯಿತು. ಮೇಲು ಕೀಳು ಎಂಬ ಭೇದ-ಭಾವ ಕೊನೆಗೊಂಡಿತು ಮತ್ತು ಸಮಸ್ತ ಜನ ಕೂಟವು ಏಕೈಕ ಅಲ್ಲಾಹನ ಮೇಲೆ ವಿಶ್ವಾಸವಿರಿಸಿ ಆರಾಧಿಸುವಂತಾಯಿತು.

## ಅಂತಿಮ ಉಯಿಲು :

ತಮ್ಮ ಮರಣದ ಕೆಲವು ವರ್ಷ ಪೂರ್ವ ತಮ್ಮೊಂದಿಗಿದ್ದ ಸುಮಾರು ಒಂದು ಕಾಲು ಲಕ್ಷ ಜನರೊಂದಿಗೆ ಮುಹಮ್ಮದ್ (ಸ) ರವರು ಹಜ್‌ಯಾತ್ರೆ ಕೈಗೊಂಡರು ಮತ್ತು ಸಮಸ್ತ ಜನರಿಗೆ ಅಂತಿಮವಾಗಿ ಉಪದೇಶ ಮಾಡುತ್ತ ತಮ್ಮ ಉಯಿಲನ್ನು ತಿಳಿಸಿದರು. ಅದರಲ್ಲಿ ಈ ರೀತಿ ಹೇಳಿದರು " ಜನರೇ ! ನಿಮ್ಮ ಮರಣದ ನಂತರ ನಿಮ್ಮ ಕರ್ಮಗಳ ವಿಚಾರಣೆಯಾಗುವಾಗ ನನ್ನ ಬಗ್ಗೆಯೂ ವಿಚಾರಿಸಲಾಗುವುದು. ನಾನು ನಿಮ್ಮ ಬಳಿ ಅಲ್ಲಾಹನ ಧರ್ಮವನ್ನು ಮತ್ತು ಸತ್ಯವನ್ನು ತಲುಪಿಸಿದ್ದೇನೋ, ಇಲ್ಲವೋ ?" ಎಲ್ಲರೂ ಉತ್ತರಿಸಿದರು, "ನಿಸ್ಸಂದೇಹವಾಗಿಯೂ ತಲುಪಿಸಿರುವಿರಿ" ಆಗ ಮುಹಮ್ಮದ್ (ಸ) ಆಕಾಶದತ್ತ ಬೆರಳು ತೋರಿಸುತ್ತ" ಅಲ್ಲಾಹ್ ನೀನೇ ಸಾಕ್ಷ್ಯನಾಗಿರುವೆ, ಅಲ್ಲಾಹ್ ನೀನೇ ಸಾಕ್ಷ್ಯನಾಗಿರುವೆ, ಅಲ್ಲಾಹ್ ನೀನೇ ಸಾಕ್ಷ್ಯನಾಗಿರುವೆ " ಎಂದು ಮೂರು ಸಲ ಉಚ್ಚರಿಸಿದರು. ತದನಂತರ ಅವರು ಜನರನ್ನು ಉದ್ದೇಶಿಸಿ" ಇನ್ನು ಮುಂದೆ ಈ ಸತ್ಯಧರ್ಮ ಯಾರ ಬಳಿ ತಲುಪಿದೆಯೋ ಅವರೆಲ್ಲರೂ ಈ ಸತ್ಯಧರ್ಮ ತಲುಪಿರದ ಜನರಿಗೆ ತಲುಪಿಸತಕ್ಕದ್ದು" ಎಂದರು.

ಅವರು ಇನ್ನೂ ಕೆಲವು ವಿಷಯಗಳನ್ನು ಸ್ಪಷ್ಟಪಡಿಸಿದ್ದರು. ತಾವು ಅಂತಿಮ ಸಂದೇಶವಾಹಕರಾಗಿದ್ದು ತಮ್ಮ ನಂತರ ಯಾರೇ

ಸಂದೇಶವಾಹಕ ಅಥವಾ ಪೈಗಂಬರ್ ಬರಲಾರರು. ತಾವೇ ಅಂತಿಮ ಋಷಿಯಾಗಿದ್ದು ನೀವು ನಿರೀಕ್ಷಿಸುತ್ತಿರುವ ಮತ್ತು ನಿಮ್ಮ ತಿಳುವಳಿಕೆಗೆ ಲಭ್ಯವಿರುವ ಆ ನರಾಶಂಸ, ಆ ಕಲ್ಕಿ ಅವತಾರವು ತಾನೇ ಆಗಿರುವ ಬಗ್ಗೆಯೂ ಸ್ಪಷ್ಟಪಡಿಸಿದರು. ಪವಿತ್ರ ಖುರ್‌ಆನಿನಲ್ಲಿ ಅಲ್ಲಾಹನು ಹೇಳಿರುವನು.

**ನಾವು ಗ್ರಂಥ ನೀಡಲ್ಪಟ್ಟವರು (ಯಹೂದರು) ಇವರ (ಸಂದೇಶವಾಹಕರ)ನ್ನು ತಮ್ಮ ಮಕ್ಕಳನ್ನು ಗುರುತಿಸುವಂತೆಯೇ ಗುರುತಿಸುತ್ತಾರೆ. ಆದರೆ ಅವರೊಲ್ಲೊಂದು ಪಂಗಡವು ತಿಳಿದೂ ಸತ್ಯವನ್ನುಮರೆಮಾಚುತ್ತಿದೆ(ಸೂರ ಅಲ್‌ಬಕರ 2:147)**

## ಪ್ರತಿಯೊಬ್ಬ ಮನುಷ್ಯನ ಕರ್ತವ್ಯ:

ಆ ಏಕೈಕ ಆರಾಧ್ಯನ ಆರಾಧನೆ ಮಾಡುವುದು ಅವನೊಂದಿಗೆ ಯಾರನ್ನೂ ಸಹಭಾಗಿಗಳನ್ನಾಗಿ ಸ್ವೀಕರಿಸದೇ ಆತನ ಅಂತಿಮ ಸಂದೇಶವಾಹಕ ಮುಹಮ್ಮದ್(ಸ)ರವರನ್ನು ಸತ್ಯವಾದಿಯನ್ನಾಗಿ ಸ್ವೀಕರಿಸುವುದು ಮತ್ತು ತನ್ಮೂಲಕ ಬಂದ ಧರ್ಮ ಮತ್ತು ಜೀವನವನ್ನು ವ್ಯಯಿಸುವ ಪದ್ಧತಿಯನ್ನು ಅನುಸರಿಸುವುದು ಇವು ಪ್ರಳಯಾಂತ್ಯದವರೆಗೆ ಈ ಸಮಸ್ತ ಜಗತ್ತಿನಲ್ಲಿ ಬರುವ ಪ್ರತಿಯೊಬ್ಬನ ಕರ್ತವ್ಯ ಮತ್ತು ಆತನ ಧಾರ್ಮಿಕ ಮತ್ತು ಮನುಷ್ಯತ್ವದ ಕಡೆಗಿನ ಜವಾಬ್ದಾರಿಯಾಗಿರುತ್ತದೆ. ಇಸ್ಲಾಮಿನಲ್ಲಿ ಇದನ್ನೇ ಸತ್ಯ ವಿಶ್ವಾಸ ಎನ್ನಲಾಗಿದೆ. ಇದರ ಹೊರತು ಮರಣದ ನಂತರ ಶಾಶ್ವತವಾಗಿ ನರಕಾಗ್ನಿಯಲ್ಲಿ ಬೇಯಬೇಕಾಗುತ್ತದೆ.



## ಕೆಲವು ಸಂಶಯಗಳು:

ಇಲ್ಲಿ ನಿಮ್ಮ ಮನಮಸ್ತಿಷ್ಕಗಳಲ್ಲಿ ಕೆಲವು ಪ್ರಶ್ನೆಗಳು ಉದ್ಭವಿಸಬಹುದು. ಮೊದಲನೆಯದಾಗಿ ''ಮರಣದ ನಂತರದ ಆ ಸ್ವರ್ಗ, ನರಕಗಳನ್ನು ಯಾರೂ ಪ್ರವೇಶಿಸುವುದು ಕಂಡು ಬರುವುದಿಲ್ಲ. ಹಾಗಿರುವಾಗ ನಾವೇಕೆ ಅದನ್ನು ನಂಬಬೇಕು?''. ಈ ವಿಷಯದಲ್ಲಿ ಒಂದು ಸತ್ಯವನ್ನು ಅರಿತುಕೊಳ್ಳುವುದು ಉಚಿತವಾಗಿರುತ್ತದೆ. ಅದೇನೆಂದರೆ ಇಲ್ಲಿಯವರೆಗೆ ಬಂದಿರುವ ಎಲ್ಲ ಪ್ರಾಚೀನ ಗಂಥಗಳಲ್ಲಿಯೂ ಸ್ವರ್ಗ-ನರಕದ ವರ್ಣನೆಯನ್ನು ಮಾಡಲಾಗಿದೆ. ಇದರಿಂದ ನಮಗೆ ತಿಳಿಯುವುದೇನೆಂದರೆ, ಸ್ವರ್ಗನರಕದ ಅಸ್ತಿತ್ವವನ್ನು ಎಲ್ಲ ಧರ್ಮಗಳಲ್ಲಿಯೂ ಪ್ರಮಾಣೀಕರಿಸಲಾಗಿದೆ.

ಇದನ್ನು ಒಂದು ಉದಾಹರಣೆಯ ಮೂಲಕವೂ ಅರಿಯಬಹುದು. ಮಗುವೊಂದು ತಾಯಿಯ ಗರ್ಭದಲ್ಲಿದ್ದು ಆ ಮಗುವಿಗೆ ನೀನು ಗರ್ಭದಿಂದ ಹೊರಬರಲಿರುವೆ, ಹಾಲು ಕುಡಿಯಲಿರುವೆ, ರೋಧಿಸುವೆ ಮತ್ತು ಹೊರಗೆ ಅನೇಕ ವಸ್ತುಗಳನ್ನು ಕಾಣುವೆ ಎಂದು ಹೇಳಿದರೆ, ಗರ್ಭದಲ್ಲಿರುವ ಅವಸ್ಥೆಯಲ್ಲಿ ಆ ಮಗುವು ವಿಶ್ವಾಸವಿರಿಸಲಾರದು. ಆದರೆ ಹೇಗೆ ಆ ಮಗುವು ಗರ್ಭದಿಂದ ಹೊರಬರುವುದೋ ? ಆ ಎಲ್ಲಾ ಸತ್ಯವನ್ನು ತನ್ನ ಕಣ್ಮುಂದೆ ಪಡೆಯುವುದು.

ಇದೇ ಪ್ರಕಾರ ಈ ಇಡೀ ವಿಶ್ವವೇ ಒಂದು ಗರ್ಭಾವಸ್ಥೆಯಾಗಿದ್ದು ಇಲ್ಲಿಂದ ಮರಣಾನಂತರ ಇಹ ಲೋಕವನ್ನು ತ್ಯಜಿಸಿ ಪರಲೋಕ ದರ್ಶನವಾಗುವಾಗ ಮನುಷ್ಯನು ಎಷ್ಟೋ ಸತ್ಯವನ್ನು ತನ್ನ ಕಣ್ಮುಂದೆ ಪಡೆಯುವನು.

ಅಲ್ಲಿನ ಆ ನರಕ ಸ್ವರ್ಗ ಮತ್ತು ಇನ್ನೂ ಅನೇಕ ವಾಸ್ತವಿಕತೆಗಳನ್ನು ನಮಗೆ ತಿಳಿಸಿದಂತಹ ಆ ಸತ್ಯವಂತನ ಬಗ್ಗೆ ಅವನ ಪರಮ ಶತ್ರುಗಳೂ, ಕಡು ವೈರಿಗಳೂ ಎಂದಿಗೂ ಸುಳ್ಳಾಗಿಸಲಾರದಾದರು ಮತ್ತು ಆಪ್ತರು ಪರರೆನ್ನದೇ ಎಲ್ಲರೂ ಆದರ ಸತ್ಯತೆಯನ್ನು ಸ್ವೀಕರಿಸಿಕೊಂಡಿರುವಂತಹ ಸುವ್ಯಕ್ತ ಖುರ್ಆನ್ ಸಹ ಈ ವಾಸ್ತವೀಕತೆಯನ್ನು ಸ್ಪಷ್ಟಪಡಿಸುತ್ತದೆ.

**ಎರಡನೆಯದಾಗಿ:**

ನಿಮ್ಮ ಮನಸ್ಸಿನಲ್ಲಿ ಕೊರೆಯುತ್ತಿರುವ ಇನ್ನೊಂದು ಸಂಶಯ ಏನಾಗಿರಬಹುದು ಎಂದರೆ - ಎಲ್ಲ ಸಂದೇಶವಾಹಕರ ಧರ್ಮವೂ ಮತ್ತು ಧಾರ್ಮಿಕ ಗ್ರಂಥಗಳೂ ಸತ್ಯವೆಂದಾದರೆ ಕೇವಲ ಇಸ್ಲಾಂನ್ನು ಸ್ವೀಕರಿಸುವ ಅವಶ್ಯಕತೆಯೇನು?

ಇಂದಿನ ಈ ವರ್ತಮಾನ ಜಗತ್ತಿಗೆ ಹೋಲಿಸಿದಲ್ಲಿ ಇದರ ಉತ್ತರ ಅತಿ ಸುಲಭವಾಗಿರುತ್ತದೆ. ನಮ್ಮ ದೇಶದಲ್ಲಿ ಒಂದು ಸಂಸತ್ (ಪಾರ್ಲಿಮೆಂಟ್) ಇದೆ. ಅದಕ್ಕೊಂದು ಸಂವಿಧಾನವಿದೆ. ಇಲ್ಲಿ ಬಂದಿರುವ ಪ್ರಧಾನ ಮಂತ್ರಿಗಳೆಲ್ಲರೂ ವಾಸ್ತವ ಪ್ರಧಾನ ಮಂತ್ರಿಗಳಾಗಿದ್ದರು. ಪಂಡಿತ್ ಜವಾಹರಲಾಲ್ ನೆಹರು, ಲಾಲ್ ಬಹದ್ದೂರ್ ಶಾಸ್ತ್ರೀ, ಇಂದಿರಾಗಾಂಧಿ, ರಾಜೀವಗಾಂಧಿ ಮತ್ತು ವಿ.ಪಿ. ಸಿಂಗ್ ಇತ್ಯಾದಿ. ದೇಶದ ಅವಶ್ಯಕತೆ ಮತ್ತು ಕಾಲಕ್ಕೆ ತಕ್ಕಂತೆ ಹೊರಡಿಸಿದ ಕಾನೂನು ಮತ್ತು ಆದೇಶಗಳೆಲ್ಲವೂ, ಭಾರತದ ಕಾನೂನೇ ಆಗಿದ್ದು, ನ್ಯಾಯಪರವಾಗಿದ್ದವು. ಆದರೆ ಈಗಿನ ವರ್ತಮಾನ ಪ್ರಧಾನಮಂತ್ರಿಯೇ ಬೇರೆ. ಅವರ ಸಂಸತ್ ಮತ್ತು ಸರ್ಕಾರ ಕಾನೂನಿನಲ್ಲಿ ಏನನ್ನಾದರೂ ಸಂಶೋಧಿಸಿ ಆಚರಣೆಗೆ ತಂದಲ್ಲಿ



ಹಳೆಯ ಕಾನೂನು ಅಂತ್ಯಗೊಳ್ಳುವುದು. ಇದರೊಂದಿಗೆ ಹೊಸ ಸಂಶೋಧಿತ ಕಾನೂನನ್ನು ಪಾಲಿಸುವುದು ಭಾರತದ ಪ್ರತಿಯೊಬ್ಬ ನಾಗರಿಕನಿಗೆ ಅನಿವಾರ್ಯವಾಗುವುದು. ಒಂದು ವೇಳೆ ಯಾರೇ ಭಾರತೀಯ ನಾಗರಿಕ ''ನಾನು ಇಂದಿರಾಗಾಂಧಿ ಪ್ರಧಾನ ಮಂತ್ರಿಯಾಗಿದ್ದಾಗಿನ ಕಾನೂನನ್ನೇ ನಂಬುತ್ತೇನೆ ಮತ್ತು ಪಾಲಿಸುತ್ತೇನೆ. ಈಗಿನ ಪ್ರಧಾನಮಂತ್ರಿಯ ಕಾನೂನನ್ನು ನಾನು ನಂಬುವುದೂ ಇಲ್ಲ ಮತ್ತು ಪಾಲಿಸುವುದೂ ಇಲ್ಲ, ಮತ್ತು ಇದರಿಂದ ವಿಧಿಸಲಾದ ತೆರಿಗೆಯನ್ನು ತುಂಬುವುದಿಲ್ಲ ಎಂದರೆ ಇಂಥವನನ್ನು ಭಾರತ ವಿರೋಧಿ ಎಂದು ಪರಿಗಣಿಸಿ ಶಿಕ್ಷೆಗೆ ಗುರಿಪಡಿಸಲಾಗುವುದು. ಅದೇ ರೀತಿ ಎಲ್ಲ ಧಾರ್ಮಿಕ ಗ್ರಂಥಗಳು ತಮ್ಮ ತಮ್ಮ ಕಾಲಕ್ಕೆ ತಕ್ಕಂತೆ ಸತ್ಯದ ಶಿಕ್ಷಣವನ್ನೀಯುತ್ತಿದ್ದವು. ಈ ರೀತಿ ಎಲ್ಲಾ ಸಂದೇಶವಾಹಕರು ಮತ್ತು ಅವರ ಧಾರ್ಮಿಕ ಗ್ರಂಥಗಳಲ್ಲಿ ವಿಶ್ವಾಸವಿರಿಸಿದಾಗ್ಯೂ ಅಂತಿಮ ಸಂದೇಶವಾಹಕರಾದ ಮುಹಮ್ಮದ್ (ಸ) ರವರಲ್ಲಿ ವಿಶ್ವಾಸವಿಟ್ಟು ಅವರ ಧರ್ಮಶಾಸ್ತ್ರವನ್ನು ಅನುಸರಿಸುತ್ತಾ ತಮ್ಮ ಜೀವನವನ್ನು ರೂಪಿಸಿ ಕೊಳ್ಳುವುದು ಪ್ರತಿಯೊಬ್ಬ ಮನುಷ್ಯನಿಗೂ ಅನಿವಾರ್ಯ ವಾಗಿರುವುದು.

**ಸತ್ಯಧರ್ಮ ಒಂದೇಯಾಗಿದೆ:**

ಆದ ಕಾರಣ, ''ಎಲ್ಲ ಧರ್ಮಗಳೂ ಆ ಏಕೈಕ ಪ್ರಭುವಿನಡೆಗೇ ಕರೆದೊಯ್ಯುವುದು. ವಿವಿಧ ಮಾರ್ಗಗಳಿದ್ದು ಗುರಿಯು ಒಂದೇ ಆಗಿದೆ'' ಎಂಬುದು ಉಚಿತವಾಗಿರಲಾರದು, ಸತ್ಯ ಏಕೈಕವಾಗಿರುತ್ತದೆ. ಅಸತ್ಯವು ಅನೇಕವಿರಲು ಸಾಧ್ಯ. ಪ್ರಕಾಶವು ಒಂದೇ ಆಗಿದ್ದು ಅಂಧಕಾರದಲ್ಲಿ ವಿಧಗಳಿರಲು ಸಾಧ್ಯ. ಸತ್ಯ ಧರ್ಮವೂ ಏಕೈಕವಾಗಿದೆ.

ಅದು ಆದಿಯಿಂದಲೂ ಏಕೈಕವಾಗಿತ್ತು. ಆದ್ದರಿಂದ ಆ ಏಕೈಕ ಧರ್ಮವನ್ನೇ ನಂಬಿ, ಆ ಏಕೈಕ ಧರ್ಮವನ್ನು ಅನುಸರಿಸುವುದೇ ಇಸ್ಲಾಂ.

ಧರ್ಮವು ಎಂದಿಗೂ ಬದಲಾಗದು, ಕೇವಲ ಅದರ ಕಾನೂನು ಕಾಲಕ್ಕೆ ತಕ್ಕಂತೆ ಅನುಕೂಲಕ್ಕನ್ವಯ ಬದಲಾಗುತ್ತಿರುತ್ತದೆ ಅದೂ ಕೇವಲ ಆ ಏಕೈಕ ಪ್ರಭುವಿನ ಆದೇಶಗಳನ್ವಯ ಮಾತ್ರ. ಸಮಸ್ತ ಮಾನವ ಜನಾಂಗವೇ ಒಂದಾಗಿದ್ದು ಅವರ ಪ್ರಭುವು ಏಕೈಕನಾಗಿರುವನು ಮತ್ತು ಮಾರ್ಗವೂ ಕೇವಲ ಒಂದೇ ಆಗಿರುವುದು. ಖುರ್‌ಆನಿನ್‌ನಲ್ಲಿ ಉಲ್ಲೇಖವಿದೆ'. ಅಲ್ಲಾಹನ ಧರ್ಮವು ಕೇವಲ ಇಸ್ಲಾಂ ಮಾತ್ರ''

**ಇನ್ನೊಂದು ಸಂಶಯ :**

ಇದರೊಂದಿಗೆ ನಿಮ್ಮ ಮನದಲ್ಲಿ ಇನ್ನೊಂದು ಸಂಶಯವೂ ಉದ್ಭವಿಸಲು ಸಾಧ್ಯ. ಮುಹಮ್ಮದ್ (ಸ)ರವರು ಅಲ್ಲಾಹನ ನೈಜ ಸಂದೇಶವಾಹಕರಾಗಿದ್ದು ಸಮಸ್ತ ವಿಶ್ವಕ್ಕೇ ಅವರು ಅಂತಿಮ ಸಂದೇಶವಾಹಕರಾಗಿರುವುದಕ್ಕೆ ಪುರಾವೆ ಏನಿದೆ?

ಉತ್ತರವು ಸ್ಪಷ್ಟವಾಗಿದೆ ಪ್ರಥಮವಾಗಿ ಈ ಖುರ್‌ಆನ್ ಅಲ್ಲಾಹನ ವಾಣಿಯಾಗಿರುವುದು. ಖುರ್‌ಆನ್ ತನ್ನ ನೈಜತೆಯನ್ನು ಸಾಬೀತು ಪಡಿಸಲಿಟ್ಟಿರುವ ತರ್ಕಗಳೆನ್ನಲ್ಲವನ್ನೂ ಒಪ್ಪಿಕೊಳ್ಳಲೇಬೇಕಾಗುವುದು ಮತ್ತು ಇಂದಿನವರೆಗೂ ಅದನ್ನು ಖಂಡಿಸಲು ಯಾರಿಂದಲೂ ಸಾಧ್ಯವಾಗಿಲ್ಲ. ಅದೇ ಖುರ್‌ಆನ್ ಮುಹಮ್ಮದ್ (ಸ)ರವರು ಸತ್ಯಸಂಧರು ಮತ್ತು ಅಂತಿಮ ದೇವ ಸಂದೇಶವಾಹಕರಾಗಿರುವದನ್ನು ಘೋಷಿಸುತ್ತದೆ. ಇನ್ನೊಂದು ವಿಷಯವೆಂದರೆ ಮುಹಮ್ಮದ್ (ಸ)ರವರ ಜೀವನದ ಪ್ರತಿಯೊಂದು ಕ್ಷಣವು ಇಡೀ ವಿಶ್ವದ ಮುಂದಿದೆ. ಅವರ



ಸಮಸ್ತ ಜೀವನವು ಇತಿಹಾಸದ ತೆರೆದ ಗ್ರಂಥದ ಪುಟಗಳಿಂತಿವೆ. ಜಗತ್ತಿನ ಯಾವುದೇ ವ್ಯಕ್ತಿಯ ಜೀವನವು ಮುಹಮ್ಮದ್ (ಸ)ರವರ ಜೀವನಗಾಥೆಯಂತೆ ಸುರಕ್ಷಿತ ಹಾಗೂ ಸ್ಪಷ್ಟವಾಗಿ ಪಾರದರ್ಶಕವಾಗಿಲ್ಲ. ಅವರ ಶತ್ರುಗಗಳೇ ಆಗಲಿ. ಇಸ್ಲಾಂ ವಿರೋಧಿಗಳೇ ಆಗಲಿ ''ಮುಹಮ್ಮದ್ (ಸ) ತಮ್ಮ ವ್ಯಕ್ತಿಗತ ಬದುಕಿನಲ್ಲಿ ಎಂದಾದರೂ ಯಾವುದಾದರೂ ಕಾರಣಕ್ಕೆ ಸುಳ್ಳು ಹೇಳಿರುವರು'' ಎಂದು ಹೇಳಲು ಸಾಧ್ಯವಾಗಿಲ್ಲ. ಅವರ ನಗರವಾಸಿಗಳು ಅವರ ಸತ್ಯತೆಯ ಪ್ರಮಾಣವನ್ನು ನೀಡಲು ಹಿಂಜರಿಯುತ್ತಿರಲಿಲ್ಲ. ಯಾವ ವ್ಯಕ್ತಿ ತನ್ನ ವ್ಯಕ್ತಿಗತ ಜೀವನದಲ್ಲಿ ಯಾವತ್ತೂ ಅಸತ್ಯವನ್ನು ನುಡಿಯಲಿಲ್ಲವೋ, ಅಂಥ ವ್ಯಕ್ತಿ ಧರ್ಮದ ಹೆಸರಿನಲ್ಲಿ ಮತ್ತು ಸೃಷ್ಟಿಕರ್ತನ ಹೆಸರಿನಲ್ಲಿ ಅಸತ್ಯ ನುಡಿಯಲು ಹೇಗೆ ಸಾಧ್ಯ? ಅವರು ತಾವು ಅಂತಿಮ ಸಂದೇಶವಾಹಕರಾಗಿರುವುದಾಗಿ ಸ್ವತಃ ನುಡಿದಿದ್ದಾರೆ''. ನನ್ನ ನಂತರ ಯಾವೊಬ್ಬ ಸಂದೇಶವಾಹಕನೂ ಬರಲಾರನು ಮತ್ತು ಯಾವುದೇ ಧರ್ಮವೂ ಬರಲಾರದು. ಮತ್ತು ನನ್ನ ಆಗಮನದ ಬಗ್ಗೆ ಈ ಮುಂಚೆ ಬಂದ ಎಲ್ಲ ಸಂದೇಶವಾಹಕರು ಭವಿಷ್ಯ ನುಡಿದಿದ್ದಾರೆ. ಅವರ ನಂತರ ಯಾವೊಬ್ಬ ಸಂದೇಶವಾಹಕನ ಆಗಮನದ ಬಗ್ಗೆ ಭವಿಷ್ಯವಾಣಿಗಳಿಲ್ಲ. ಎಲ್ಲ ಧಾರ್ಮಿಕ ಗ್ರಂಥಗಳಲ್ಲಿಯೂ ಪ್ರಸ್ತುತವಾಗಿರುವ ಅಂತಿಮ ಋಷಿ ಕಲ್ಕಿ ಅವತಾರದ ಬಗ್ಗೆ ನುಡಿದಿರುವ ಭವಿಷ್ಯವಾಣಿ ಮತ್ತು ಅವರ ಲಕ್ಷಣ ಮತ್ತು ಸ್ವರೂಪಗಳ ವಿಶ್ಲೇಷಣೆ ಕೇವಲ ಮುಹಮ್ಮದ್ (ಸ)ರವರನ್ನೇ ಹೋಲುತ್ತದೆ.

**ಡಾ॥ ವೇದಪ್ರಕಾಶ ಉಪಾಧ್ಯಾಯ :**

ಡಾ॥ ವೇದಪ್ರಕಾಶ ಉಪಾಧ್ಯಾಯರು ಹೇಳಿರುವಂತೆ "ಯಾರು ಇಸ್ಲಾಂನ್ನು ಸ್ವಿಕರಿಸುವುದಿಲ್ಲವೋ, ಮುಹಮ್ಮದ್ (ಸ) ಮತ್ತು ಅವರ ಧರ್ಮದ ಮೇಲೆ ವಿಶ್ವಾಸವಿರಿಸುವುದಿಲ್ಲವೋ ಅವನು ಹಿಂದೂ ಎಂದು ಎನ್ನಿಸಿಕೊಳ್ಳಲಾರ. ಯಾಕೆಂದರೆ ಹಿಂದು ಧಾರ್ಮಿಕ ಗ್ರಂಥಗಳಲ್ಲಿ ಕಲ್ಕಿ ಅವತಾರ ಮತ್ತು ನರಾಶಂಸ ಎಂಬುವವನು ಈ ಭೂಮಿಯಲ್ಲಿ ಪ್ರಕಟಗೊಂಡಾಗಿನಿಂದ ಕೇವಲ ಅವನನ್ನು ಮತ್ತು ಅವನು ತಂದಂಥ ಧರ್ಮವನ್ನು ನಂಬಿ ನಡೆಯುವಂತೆ ಸೂಚಿಸಲಾಗಿದೆ. ಆದ ಕಾರಣ ಯಾವ ಹಿಂದು ತನ್ನ ಧರ್ಮ ಗ್ರಂಥಗಳಲ್ಲಿ ವಿಶ್ವಾಸ ವಿಟ್ಟಿರುವನೋ ಅವನು ಈ ಎಲ್ಲ ಸತ್ಯಗಳನ್ನು ನಿರಾಕರಿಸಿದರೆ ಮರಣಾನಂತರದ ಜೀವನದಲ್ಲಿ ನರಕ್ಕಾಗಿಯ ಪಾಲಾಗುವನು. ಅವನು ತನ್ನ ಪ್ರಭುವಿನ ಸಾಕ್ಷಾತ್ ದರ್ಶನದಿಂದ ವಂಚಿತನಾಗುವನು ಮತ್ತು ಆ ಏಕೈಕ ಆರಾಧ್ಯನ ಕ್ರೋಧಕ್ಕೆ ಪಾತ್ರನಾಗುವನು.

**ಸತ್ಯವಿಶ್ವಾಸದ ಅವಶ್ಯಕತೆ :**

ಮರಣಾನಂತರದ ಜೀವನವಷ್ಟೇ ಅಲ್ಲದೆ ಇಹಲೋಕದಲ್ಲೂ ಸತ್ಯ ವಿಶ್ವಾಸ ಮತ್ತು ಇಸ್ಲಾಂ ನಮ್ಮ ಅವಶ್ಯಕತೆಯಾಗಿರುವುದು. ಮಾನವನ ಆದ್ಯ ಕರ್ತವ್ಯ. ಏನೆಂದರೆ ಅವನು ತನ್ನ ಪ್ರಭುವಿನ ಆರಾಧನೆ ಮಾಡುವುದು. ಯಾರು ಅವನ ದ್ವಾರವನ್ನು ಬಿಟ್ಟು ಅನ್ಯರ ಮುಂದೆ



ತಲೆಬಾಗುವರೋ ಅವರ ಪಾಡು ನಾಯಿಗಿಂತ ಕಡೆಯಾಗಿರುವುದು. ನಾಯಿಯೂ ತನ್ನ ಯಾಜಮಾನನ ದ್ವಾರದಲ್ಲಿಯೇ ಬಿದ್ದಿರುತ್ತದೆ. ಮತ್ತು ಎಲ್ಲವನ್ನೂ ತನ್ನ ಯಜಮಾನನಿಂದಲೇ ನಿರೀಕ್ಷಿಸುತ್ತದೆ. ತನ್ನ ನೈಜ ಪ್ರಭುವನ್ನು ಮರೆತು ಮನಬಂದೆಡೆಯೆಲ್ಲ ತಲೆಬಾಗುತ್ತ ಅಲೆದಾಡುವವನು ಎಂತಹ ಮನುಷ್ಯನಾಗಿರುವನು ?

ಆದರೆ ಈ ಸತ್ಯವಿಶ್ವಾಸದ ಹೆಚ್ಚಿನ ಅವಶ್ಯಕತೆ ಮರಣದ ನಂತರ ಇರುವುದು ಆ ಜೀವನವನ್ನು ಪ್ರವೇಶಿಸಿದ ಮನುಷ್ಯ ಎಂದಿಗೂ ಹಿಂದಿರುಗಲಾರ ಮತ್ತು ಎಷ್ಟೇ ಬಯಸಿದರೂ ಅವನಿಗೆ ಸಾವು ಸಮೀಪಿಸಲಾರದು. ಆ ಕಾಲದ ಮರುಗುವಿಕೆ ಮತ್ತು ಪಶ್ಚಾತ್ತಾಪ ಯಾರಿಗೂ ಸಹಕಾರಿಯಾಗಿರಲಾರದು. ಒಂದು ವೇಳೆ ಸತ್ಯ ವಿಶ್ವಾಸದ ಹೊರತಾಗಿ ಇಹಲೋಕದಿಂದ ಪಲಾಯನವಾದರೆ ಆ ವ್ಯಕ್ತಿ ಶಾಶ್ವತವಾಗಿ ನರಕಾಗ್ನಿಯ ಸವಿಯನ್ನನುಭವಿಸ ಬೇಕಾಗುವುದು. ಇಹ ಲೋಕದಲ್ಲೇ ಬೆಂಕಿಯ ಒಂದು ಕಿಡಿ ನಮ್ಮನ್ನು ಸೋಂಕಿದರೆ ನಾವು ಚಡಪಡಿಸಲಾರಂಭಿಸುತ್ತೇವೆ. ಹಾಗಿರುವಾಗ ಇಲ್ಲಿಯ ಬೆಂಕಿಯ ಉಷ್ಣತೆಗೆ ಹೋಲಿಸಿದಲ್ಲಿ ಎಪ್ಪತ್ತು ಪಟ್ಟು ಅಧಿಕ ಉಷ್ಣತೆಯಿಂದ ಕೂಡಿರುವ ಆ ನರಕಾಗ್ನಿಯನ್ನು ಸಹಿಸಿಕೊಳ್ಳುವುದು ಹೇಗೆ ತಾನೆ ಸಾಧ್ಯ ? ಅದೂ ಶಾಶ್ವತವಾಗಿ ಆ ನರಕಾಗ್ನಿಯನ್ನನುಭವಿಸುದಂತೂ ಊಹಿಸುವುದಕ್ಕೂ ಭಯ ಎನಿಸುತ್ತದೆ. ಒಂದು ಚರ್ಮವು ಸುಟ್ಟು ಕರಟಿ ಹೋದಾಗಲೆಲ್ಲಾ ಶಿಕ್ಷೆಯ ಸವಿಯನ್ನನುಭವಿಸುವಂತಾಗಲು ಅದರ

ಬದಲು ಹೊಸ ಚರ್ಮವನ್ನು ನೀಡಲಾಗುವುದು. ಹೀಗೆ ನಿರಂತರ ಶಿಕ್ಷೆಯ ಸವಿಯನ್ನನುಭವಿಸಲೇ ಬೇಕಾಗುವುದು.

**ಪ್ರೀತಿಯ ಓದುಗರೇ,**

ನನ್ನ ಪ್ರೀತಿಯ ಓದುಗರೇ ! ಸಾವು ಖಚಿತ ಯಾವುದೇ ವೇಳೆ ಸಾವು ನಮ್ಮನ್ನು ಸಮೀಪಿಸಬಹುದು. ಒಮ್ಮೆ ಉಸಿರೆಳೆದುಕೊಂಡರೆ ಅದನ್ನು ಮರಳಿ ಬಿಡುತ್ತೇವೆ ಎನ್ನುವುದರ ಭರವಸೆಯೇ ಇರುವುದಿಲ್ಲ. ನಮ್ಮ ಬಳಿ ಸಾವು ಸಮೀಪಿಸುವಲ್ಲಿಯವರೆಗಿನ ಅವಕಾಶವಿದೆ. ನಮ್ಮ ಆದ್ಯ ಮತ್ತು ಮಹತ್ತಾದ ಜವಾಬ್ದಾರಿಯೊಂದನ್ನು ಸ್ಮರಿಸಿಕೊಳ್ಳ ಬೇಕಾಗಿದೆ. ಸತ್ಯ ವಿಶ್ವಾಸದ ವಿನಾ ಈ ಜೀವನವೂ ವ್ಯರ್ಥವಾಗುವುದು ಮತ್ತು ಮರಣದ ನಂತರದ ಜೀವನವೂ ವ್ಯರ್ಥವಾಗುವುದು.

ಒಂದು ದಿನ ಎಲ್ಲರಿಗೂ ತಮ್ಮ ಪ್ರಭುನೆಡೆಗೆ ಮರಳಬೇಕಾಗುವುದು. ಅಂದು ಎಲ್ಲಕ್ಕಿಂತ ಮೊದಲು ಸತ್ಯ ವಿಶ್ವಾಸದ ಪ್ರಶ್ನೆಯಾಗುವುದು

ಇದರಲ್ಲಿ ನನ್ನ ಸ್ವಾರ್ಥವೂ ಅಡಗಿದೆ. ಅದೇನೆಂದರೆ ಆ ನಿರ್ಣಾಯಕ ದಿನದಂದು ನೀವೆಲ್ಲ ಸೇರಿ ''ನಮ್ಮಲ್ಲಿಗೆ ಈ ಸತ್ಯ ವಿಶ್ವಾಸದ ಕರೆ ಬಂದೇ ಇರಲಿಲ್ಲ'' ಎಂದು ಹೇಳಿದರೆ ಅದಕ್ಕೆ ನಾನೂ ಕಾರಣ ನಾದೇನು ?

ಈ ಎಲ್ಲ ಸತ್ಯ ಸಂಗತಿಗಳು ನಿಮ್ಮ ಮನಸ್ಸಿನಲ್ಲಿ ಮನೆ ಮಾಡಿ ರುವುದು ಎಂದು ಆಶಿಸುತ್ತೇನೆ. ಹಾಗಿದ್ದಲ್ಲಿ, ಬನ್ನಿ ಭಾಗ್ಯವಂತರೇ



ಸಹೃದಯ ಸತ್ಪುರುಷರೇ, ಯಾರು ನಮ್ಮ ಮನಸ್ಸಿನಲ್ಲಡಗಿರುವ ರಹಸ್ಯಗಳನ್ನು ಅರಿಯುವವನೆಂದು ನಂಬಿರುವೆವೋ ಆ ನೈಜ ಪ್ರಭುವನ್ನೇ ಸಾಕ್ಷ್ಯವಾಗಿರಿಸಿಕೊಂಡು, ಶುದ್ಧ ಮನಸ್ಸಿನಿಂದ ಸತ್ಯ ವಿಶ್ವಾಸವನ್ನು ಸ್ವೀಕರಿಸಿ ಈ ಪ್ರಮಾಣವನ್ನು ನುಡಿಯೋಣ.

**''ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹು ವ ಅಶ್ ಅದು ಅನ್ನ ಮುಹಮ್ಮದನ್ ಅಬ್ದುಹೂ ವ ರಸೂಲುಹು** (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ಅಲ್ಲಾಹನ ಹೊರತು ಆರಾಧನೆಗೆ ಅರ್ಹನು ಇನ್ನೊರ್ವನಿಲ್ಲ. ಅವನು ಏಕೈಕನು ಅವನಿಗೆ ಯಾವುದೇ ಸಹ ಭಾಗಿಗಳಿಲ್ಲ ಎಂದು ನಾನು ಸಾಕ್ಷ್ಯವಹಿಸುತ್ತೇನೆ. ಮತ್ತು ಮುಹಮ್ಮದ್ (ಸ) ಅಲ್ಲಾಹನ ದಾಸ ಮತ್ತು ಸಂದೇಶವಾಹಕ ರಾಗಿರುವರೆಂದೂ ನಾನು ಸಾಕ್ಷ್ಯ ವಹಿಸುತ್ತೇನೆ.

ಸತ್ಯ ನಿಷೇಧ ನೀತಿಯಿಂದ (ಕುಫ್ರ್) ದೇವ ಸಹಭಾಗಿತ್ವದಿಂದ (ಶಿರ್ಕ್) ಮತ್ತು ಎಲ್ಲ ರೀತಿಯ ಪಾಪ ಕಾರ್ಯಗಳ ಕುರಿತು ನಾನು ಅಲ್ಲಾಹನ ಅಭಯವನ್ನು ಯಾಚಿಸುತ್ತೇನೆ. ಈ ಎಲ್ಲದರ ಬಗ್ಗೆ ಪಶ್ಚಾತ್ತಾಪ ವ್ಯಕ್ತಪಡಿಸುತ್ತೇನೆ ಮತ್ತು ಇದರೊಂದಿಗೆ ಒಂದು ಪ್ರಮಾಣವನ್ನೂ ಮಾಡುತ್ತೇನೆ. ಅದೇನೆಂದರೆ ''ನನ್ನ ನೈಜ ಸೃಷ್ಟಿಕರ್ತ ಪ್ರಭುವಿನ ಆದೇಶಗಳನ್ನು ಸಂಪೂರ್ಣವಾಗಿ ಸ್ವೀಕರಿಸುವೆನು, ಮತ್ತು ಸತ್ಯಸಂಧ ಪೈಗಂಬರ್ ಮುಹಮ್ಮದ್ (ಸ) ರವರನ್ನು ಸಂಪೂರ್ಣವಾಗಿ

ಅನುಸರಿವೆನು'' ಎಂದು ಕರುಣಾಮಯಿಯೂ, ದಯಾಮಯನೂ ಆದ ನಮ್ಮ ಪ್ರಭು ನಮ್ಮ ನಿಮ್ಮೆಲ್ಲರನ್ನೂ ಈ ಸನ್ಮಾರ್ಗದಲ್ಲೇ ಅಂತ್ಯದವರೆಗೂ ಸ್ಥಿರವಾಗಿಡಲೆಂದು ಹಾರೈಸುತ್ತೇನೆ.

ನನ್ನ ಪ್ರಿಯ ಮಿತ್ರರೇ ! ನೀವು ನಿಮ್ಮ ಜೀವನದ ಅಂತಿಮ ಘಟ್ಟದವರೆಗೂ ಈ ದೃಢನಂಬಿಕೆ ಮತ್ತು ಸತ್ಯ ವಿಶ್ವಾಸದ ಅನುರೂಪ ಜೀವನ ಸಾಗಿಸಿದರೆ, ನಿಮ್ಮೆಡೆಗಿರುವ ಪ್ರೇಮದ ಪ್ರಯುಕ್ತ ನಿಮ್ಮ ಈ ಸಹೋದರನು ನಿಭಾಯಿಸಿರುವ ಕರ್ತವ್ಯವನ್ನು ಅರಿತುಕೊಳ್ಳುವಿರಿ.

**ಸತ್ಯ ವಿಶ್ವಾಸದ ಪರೀಕ್ಷೆ:**

ಇಸ್ಲಾಂ ಮತ್ತು ಸತ್ಯ ವಿಶ್ವಾಸದ ಕಾರಣದಿಂದ ನೀವು ಪರೀಕ್ಷೆಗೊಳಗಾಗಬಹುದು. ಆದರೆ, ಅಂತಿಮವಾಗಿ ಸತ್ಯಕ್ಕೇ ಜಯ ಲಭಿಸುವುದು. ಇಲ್ಲಿಯೂ ಸತ್ಯವೇ ಜಯಗೊಳ್ಳುವುದು. ಒಂದು ವೇಳೆ, ಜೀವನವೆಲ್ಲಾ ಇಂಥ ಪರೀಕ್ಷೆಗಳನ್ನು ಎದುರಿಸಬೇಕಾಗಿ ಬಂದರೆ ಅದನ್ನೆಲ್ಲ ಸಹಿಸಿಕೊಂಡು ತಾಳ್ಮೆ ವಹಿಸಬೇಕು ಯಾಕೆಂದರೆ ಇಹ ಲೋಕದ ಜೀವನವಂತೂ ಕೇವಲ ಕೆಲವು ದಿನಗಳಿಗೆ ಮಾತ್ರ ಸೀಮಿತವಾಗಿದೆ. ಮರಣದ ನಂತರದ ಆ ಅಪಾರ ಜೀವನ, ಅಲ್ಲಿ ಲಭಿಸಲಿರುವ ಸ್ವರ್ಗ ಮತ್ತು ಅಲ್ಲಿನ ಸುಖವನ್ನು ಪಡೆಯಲು, ತನ್ನ ಪ್ರಭುವನ್ನು ಒಲಿಸಿಕೊಳ್ಳಲು ಮತ್ತು ಆತನ ಸಾಕ್ಷಾತ್ ದರ್ಶನಕ್ಕೋಸ್ಕರ ಇಹಲೋಕದ ಎಲ್ಲ ಪರೀಕ್ಷೆಗಳನ್ನು ಸಹಿಸಿಕೊಳ್ಳುವದರಲ್ಲೇ ಒಳಿತಿದೆ.



**ನಿಮ್ಮ ಕರ್ತವ್ಯ:**

ಇನ್ನೊಂದು ವಿಷಯವೇನೆಂದರೆ ಸತ್ಯ ವಿಶ್ವಾಸ ಮತ್ತು ಇಸ್ಲಾಂ ಎಂಬ ಈ ಮಹಾ ಸತ್ಯವು ಇದು ಯಾರ ಬಳಿ ತಲುಪಿಲ್ಲವೋ ಆ ಎಲ್ಲ ಸಹೋದರರ ಅಮಾನತು ಮತ್ತು ಹಕ್ಕಾಗಿರುತ್ತದೆ. ಆದ್ದರಿಂದ ನಿಸ್ವಾರ್ಥ ಮನೋಭಾವದಿಂದ ಕೇವಲ ನಿಮ್ಮ ಸಹೋದರರ ಮೇಲಿನ ಅನುಕಂಪದಿಂದ, ಮತ್ತು ಅವರನ್ನು ಪ್ರಭುವಿನ ಕ್ರೋಧ ಮತ್ತು ನರಕಾಗ್ನಿಯ ಶಿಕ್ಷೆಯಿಂದ ರಕ್ಷಿಸಲು, ಅವರ ನೋವು ನಲಿವನ್ನು ಅರ್ಥೈಸಿಕೊಂಡು, ಯಾವ ರೀತಿ ಪ್ರಿಯ ಪ್ರವಾದಿ ಮುಹಮ್ಮದ್ (ಸ) ಈ ಸತ್ಯವನ್ನು ಜನರಿಗೆ ತಲುಪಿಸಿದರೋ ಅದೇ ರೀತಿ ನೀವೂ ಈ ಸತ್ಯವನ್ನು ತಿಳಿಹೇಳುವುದು ನಿಮ್ಮ ಕರ್ತವ್ಯವಾಗಿರುತ್ತದೆ. ಅವರೂ ಈ ಸನ್ಮಾರ್ಗವನ್ನು ಕಂಡುಕೊಳ್ಳಲೆಂದು ಆ ಏಕೈಕ ಒಡೆಯನ ಬಳಿ ಪ್ರಾರ್ಥಿಸೋಣ. ಯಾರ ಕಣ್ಣ ಮುಂದೆ ಒಬ್ಬ ಕುರುಡ ಏನೂ ಕಾಣಲಾರದ ಪರಿಸ್ಥಿತಿಯಲ್ಲಿ ಅಗ್ನಿ ಕುಂಡದಲ್ಲಿ ಬೀಳುವತ್ತ ಹೋರಟಿರುವನೋ, ಆದರೆ ಆ ವ್ಯಕ್ತಿ ತನ್ನ ಬಾಯಿಯಿಂದ ''ಈ ಮಾರ್ಗವು ನಿಮ್ಮನ್ನು ಅಗ್ನಿಕುಂಡದೆಡೆಗೆ ಕೊಂಡೊಯ್ಯುತ್ತಲಿದೆ'' ಎಂದು ಒಂದು ಮಾತನ್ನೂ ಹೇಳದಿದ್ದರೆ ಅಂಥ ವ್ಯಕ್ತಿ ಮನುಷ್ಯ ಜೀವಿ ಎಂದು ಹೇಳಿಕೊಳ್ಳಲು ಅರ್ಹನೇ ? ಆ ಕುರುಡನನ್ನು ಹಿಡಿದು ಕಾಪಾಡುವುದೇ ಮನುಷ್ಯತ್ವದ ಬೇಡಿಕೆ ಮತ್ತು ''ನಾನಿರುವವರೆಗೂ ಖಂಡಿತವಾಗಿಯೂ

ನಿಮ್ಮನ್ನು ಅಗ್ನಿಕುಂಡದಲ್ಲಿ ಬೀಳದಂತೆ ತಡೆಯುತ್ತಲೇ ಇರುವೆನು" ಎಂದು ಪ್ರಮಾಣ ಮಾಡಿ ನಿಮ್ಮ ಕರ್ತವ್ಯವನ್ನು ನಿರ್ವಹಿಸಿರಿ.

ಸತ್ಯ ವಿಶ್ವಾಸ ಸ್ವೀಕರಿಸಿದ ನಂತರ, ಯಾರಿಗೆ ಧರ್ಮದ, ಸಂದೇಶವಾಹಕರ ಮತ್ತು ಖುರ್‌ಆನಿನ ಸನ್ಮಾರ್ಗ ಲಭಿಸಿದೆಯೋ ಅವರೆಲ್ಲರ ಕರ್ತವ್ಯವೇನೆಂದರೆ, ಅವರು ಶಿರ್ಕ್ (ದೇವ ಸಹಭಾಗಿತ್ವ) ಮತ್ತು ಕುಫ್ರ್ (ಸತ್ಯ ನಿಷೇಧ)ದಲ್ಲಿ ಸಿಲುಕಿಕೊಂಡಿರುವ ಜನರನ್ನು ರಕ್ಷಿಸುವುದರಲ್ಲಿ ನಿಸ್ವಾರ್ಥವಾಗಿ ನಿರತರಾಗಬೇಕು. ಪ್ರೀತಿಯಿಂದ ಇಲ್ಲವೇ ಕೈ ಕಾಲು ಹಿಡಿದಾದರೂ ಅವರು ಸತ್ಯದಿಂದ ಸರಿದು ದುರ್ಮಾರ್ಗದೆಡೆಗೆ ಹೋಗದಂತೆ ತಡೆಯಬೇಕು. ನಿಸ್ವಾರ್ಥ ಮತ್ತು ನೈಜ ಅನುಕಂಪದೊಂದಿಗೆ ನುಡಿಯುವ ಮಾತುಗಳು ಮನಸ್ಸಿನಲ್ಲಿ ಮನೆ ಮಾಡುತ್ತವೆ. ನಿಮ್ಮ ಕಾರಣದಿಂದ ಒಬ್ಬ ವ್ಯಕ್ತಿಗೂ ಸನ್ಮಾರ್ಗ ಲಭಿಸಿದರೆ ಮತ್ತು ತನ್ನ ನೈಜ ಪ್ರಭುವಿನ ಮಾರ್ಗದಲ್ಲಿ ನಡೆದರೆ ನೀವೂ ಪಾರಾಗುವಿರಿ. ಆದ್ದರಿಂದ ಯಾವೊಬ್ಬ ವ್ಯಕ್ತಿಯು ಯಾರನ್ನಾದರೂ ಸತ್ಯ ನಿಷೇಧ ನೀತಿಯಿಂದ ಮತ್ತು ದೇವ ಸಹಭಾಗಿತ್ವದಿಂದ ತಡೆದು ಸನ್ಮಾರ್ಗದೆಡೆಗೆ ಕೊಂಡೊಯ್ಯುವನೋ ಅಲ್ಲಾಹನು ಆ ವ್ಯಕ್ತಿಯಿಂದ ಅತ್ಯಂತ ಸಂತುಷ್ಟನಾಗುತ್ತಾನೆ. ಯೋಚಿಸಿ, ನಿಮ್ಮ ಮಗ ನಿಮ್ಮ ವಿರುದ್ಧವಾಗಿ ನಿಮ್ಮ ಶತ್ರುಗಳೊಂದಿಗೆ ಕೈ ಜೋಡಿಸಿಕೊಂಡರೆ ಮತ್ತು ಯಾರಾದರೊಬ್ಬ ಸಜ್ಜನ ವ್ಯಕ್ತಿ ಅವನಿಗೆ ಬುದ್ಧಿವಾದ ಹೇಳಿ ನಿಮ್ಮ ಆಜ್ಞಾನುಸಾರಿ ಪುತ್ರನನ್ನಾಗಿ ಮಾಡಿದರೆ ನೀವು ಎಷ್ಟು ಪ್ರಸನ್ನ ರಾಗುವಿರಲ್ಲವೇ?



ಯಾರು ಸತ್ಯ ವಿಶ್ವಾಸವನ್ನು ತಲುಪಿಸುವ ಮತ್ತು ಹಂಚುವ ಮಾಧ್ಯಮನಾಗುವನೋ ಅಂಥ ದಾಸನೊಂದಿಗೆ ಆ ನಮ್ಮ ಪ್ರಭುವು ಇದಕ್ಕೂ ಅಧಿಕಪಟ್ಟು ಸಂತುಷ್ಟನಾಗುತ್ತಾನೆ.

**ಸತ್ಯವಿಶ್ವಾಸ ಸ್ವೀಕರಿಸಿದ ನಂತರ:**

ಸತ್ಯವಿಶ್ವಾಸವನ್ನು ಸ್ವೀಕರಿಸಿಕೊಂಡ ನಂತರ ಆ ಏಕೈಕ ಸೃಷ್ಟಿಕರ್ತನ ನೈಜ ದಾಸನಾದ ಬಳಿಕ ನಿಮ್ಮ ಮೇಲೆ ದಿನಕ್ಕೆ ಐದು ಹೊತ್ತಿನ ನಮಾಝ್ ಕಡ್ಡಾಯವಾಗುವುದು. ಅದನ್ನು ಕಲಿಯಿರಿ ಮತ್ತು ಪಠಿಸಿರಿ. ಇದರಿಂದ ಆತ್ಮಶಾಂತಿ ಮತ್ತು ಅಲ್ಲಾಹನೆಡೆಗಿನ ನಿಮ್ಮ ಪ್ರೇಮವು ವೃದ್ಧಿಸುವುದು. ರಮ್‌ಝಾನ್ ತಿಂಗಳಲ್ಲಿ ಒಂದು ತಿಂಗಳ ಉಪವಾಸವನ್ನಾಚರಿಸಬೇಕಾಗುವುದು. ಒಂದು ವೇಳೆ ನೀವು ಶ್ರೀಮಂತರಾಗಿದ್ದರೆ ನಿಮ್ಮ ಧನದಲ್ಲಿ ಬಡವರಿಗೆ ನಿಶ್ಚಯಿಸಲ್ಪಟ್ಟ ಹಕ್ಕನ್ನು ನೀಡಬೇಕು. ಮತ್ತು ಆರ್ಥಿಕ ಹಾಗೂ ದೈಹಿಕ ಸಾಮರ್ಥ್ಯ ವಿದ್ದಲ್ಲಿ ಜೀವನದಲ್ಲೊಮ್ಮೆ ಹಜ್ ಯಾತ್ರೆ ಕೈಗೊಳ್ಳಬೇಕು.

ಎಚ್ಚರಿಕೆ! ಇನ್ನು ಮುಂದೆ ನಿಮ್ಮ ತಲೆಯು ಅಲ್ಲಾಹನ ಹೊರತು ಅನ್ಯರ ಮುಂದೆ ಎಂದಿಗೂ ಬಾಗಕೂಡದು ನಿಮ್ಮ ಮೇಲೆ ಮದ್ಯ, ಜೂಜು, ಬಡ್ಡಿ ವ್ಯವಹಾರ, ಹಂದಿ ಮಾಂಸ, ಲಂಚ ಮತ್ತು ಇನ್ನಿತರ ನಿಷಿದ್ಧ ವಸ್ತುಗಳನ್ನು ನಿಷೇಧಗೊಳಿಸಲಾಗಿದೆ. ಇವೆಲ್ಲವುಗಳಿಂದ ಸುರಕ್ಷಿತವಾಗಿರಿ ಮತ್ತು ಅಲ್ಲಾಹನಿಂದ ಪವಿತ್ರಗೊಳಿಸಲಾದ ಎಲ್ಲ ವಸ್ತುಗಳನ್ನು ಸಂಪೂರ್ಣ ಸಂತೃಪ್ತಿಯೊಂದಿಗೆ ಸೇವಿಸಿರಿ.

ತಮ್ಮ ಪ್ರಭುವಿನ ಕಡೆಯಿಂದ ನೀಡಲ್ಪಟ್ಟ ಪವಿತ್ರಗ್ರಂಥ (ಖುರ್‌ಆನ್) ವನ್ನು ನಿಯಮಿತವಾಗಿ ಪಠಿಸಿರಿ. ಪಾವಿತ್ರ್ಯತೆ ಮತ್ತು ಸ್ವಚ್ಚತೆಯ

ನಿಯಮಗಳನ್ನು ಕಲಿಯಿರಿ ಮತ್ತು ನೈಜ ಮನಸ್ಸಿನಿಂದ ಹೀಗೆ ಪ್ರಾರ್ಥಿಸುತ್ತಲಿರಿ. '' ಓ ನಮ್ಮ ಪ್ರಭುವೇ ! ನಮ್ಮನ್ನೂ ನಮ್ಮ ಬಂಧು ಬಳಗದವರನ್ನೂ ನಮ್ಮ ಪರಿವಾರದ ಎಲ್ಲ ಸದಸ್ಯರನ್ನೂ ನಮ್ಮ ಸಂಬಂಧಿಕರನ್ನೂ ಮತ್ತು ಈ ಭೂ ಮಂಡಲದಲ್ಲಿ ವಾಸಿಸುತ್ತಿರುವ ಸಕಲ ಮಾನವ ಕೂಟವನ್ನೂ ಸತ್ಯವಿಶ್ವಾಸದೊಂದಿಗೆ ಜೀವಿಸುವ ಮತ್ತು ಸತ್ಯವಿಶ್ವಾಸದೊಂದಿಗೇ ಮೃತ್ಯುವಶವಾಗುವ ಭಾಗ್ಯವನ್ನು ದಯಪಾಲಿಸು. ಏಕೆಂದರೆ ಸತ್ಯ ವಿಶ್ವಾಸವೊಂದೇ ಮಾನವ ಸಮಾಜಕ್ಕೆ ಆದ್ಯ ಮತ್ತು ಅಂತಿಮ ಆಸರೆಯಾಗಿದೆ.

ಅಲ್ಲಾಹನ ದಾಸ ಮತ್ತು ಸಂದೇಶವಾಹಕ ಇಬ್ರಾಹಿಂ (ಅ) ತಮ್ಮಲ್ಲಿರುವ ಸತ್ಯ ವಿಶ್ವಾಸದ ಕಾರಣ ಧಗಧಗಿಸುತ್ತಿರುವ ಅಗ್ನಿಯಲ್ಲಿ ಹಾರಿದಾಗ್ಯೂ ಅವರಿಗೆ ಕೂದಲೆಳೆಯಷ್ಟೂ ಹಾನಿಯಾಗಲಿಲ್ಲ. ಇಂದಿಗೂ ಆ ಸತ್ಯವಿಶ್ವಾಸದ ಶಕ್ತಿಯು ಬೆಂಕಿಯನ್ನು ಹೂವಾಗಿ ಮಾರ್ಪಡಿಸಬಲ್ಲುದು ಮತ್ತು ಸತ್ಪಥದಲ್ಲಿ ಬರುವ ಅಡೆತಡೆಗಳನ್ನು ನಿರ್ನಾಮಗೊಳಿಸಬಲ್ಲದು.

ಇಂದೂ ಸಹ ಇಬ್ರಾಹೀಂರಂತಹ ವಿಶ್ವಾಸ ಉಂಟಾದರೆ ಅಗ್ನಿಯೂ ಹೂವಾಗಿ ಪರಿವರ್ತನೆಗೊಳ್ಳಬಹುದು.

★★★

ಹೆಚ್ಚಿನ ವಿವರಗಳಿಗಾಗಿ ಸಂಪರ್ಕಿಸಿ :

**ಶಾಂತಿಧಾಮ, ರಿ.**

ಅಂಚೆ ಪೆಟ್ಟಿಗೆ ನಂ. 1726, ಬೆಂಗಳೂರು-17. ದೂರವಾಣಿ : 080-32957367